# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಅಕ್ಟೋಬರ್ ೮, ೨೦೧೫ (ಅಶ್ವಯುಜ ೧೬, ಶಕ ವರ್ಷ ೧೯೩೭)<br>Bengaluru, Thursday,October 8, 2015 (Aashwayuja 16, Shaka Varsha 1937) | ಸಂಚಿಕೆ ೪೧<br>Issue 41 |
|---|---|---|

## ಭಾಗ ೩

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಅರಣ್ಯ ಇಲಾಖೆ**

**ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಮುಖ್ಯಸ್ಥರು, ಅರಣ್ಯ ಪಡೆ) ಹಾಗೂ ಆಯ್ಕೆ ಪ್ರಾಧಿಕಾರ**

**ಇವರ ಕಚೇರಿ, ಅರಣ್ಯ ಭವನ, ಮಲ್ಲೇಶ್ವರಂ, ಬೆಂಗಳೂರು-560003**

**ಅಧಿಸೂಚನೆ**

**ಸಂಖ್ಯೆ: ಬಿ9-ನೇಮಕಾತಿ-ವಿವ-2/2015-16 ದಿನಾಂಕ 15-08-2015**

**ಹೈದರಾಬಾದ್-ಕರ್ನಾಟಕ ಪ್ರದೇಶದ ಉಪ ವಲಯ ಅರಣ್ಯಾಧಿಕಾರಿ ಹುದ್ದೆಗಳಿಗೆ ನೇರ ನೇಮಕಾತಿ**

ಕರ್ನಾಟಕ ಅರಣ್ಯ ಇಲಾಖಾ ಸೇವೆಗಳು (ನೇಮಕಾತಿ) (ತಿದ್ದುಪಡಿ) ನಿಯಮಗಳು, 2012 ಮತ್ತು ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್-ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ನಿಯಮ, 2013ರ ನಿಯಮಗಳಂತೆ ಅರಣ್ಯ ಇಲಾಖೆಯ ಹೈದರಾಬಾದ್-ಕರ್ನಾಟಕ ಪ್ರದೇಶ ವ್ಯಾಪ್ತಿಗೆ ಒಳಪಡುವ ಬೀದರ್, ಕಲಬುರಗಿ, ಯಾದಗಿರಿ, ರಾಯಚೂರು, ಕೊಪ್ಪಳ ಮತ್ತು ಬಳ್ಳಾರಿ ಜಿಲ್ಲೆಗಳ ಒಟ್ಟು **19** ಉಪ ವಲಯ ಅರಣ್ಯಾಧಿಕಾರಿ ಹುದ್ದೆಗಳ ನೇರ ನೇಮಕಾತಿಗಾಗಿ ಈ ಮೇಲ್ಕಾಣಿಸಿದ ಜಿಲ್ಲೆಗಳ ಖಾಯಂ ನಿವಾಸಿಗಳಾಗಿರುವ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

**1. ಅರ್ಜಿ ಸಲ್ಲಿಸುವ ವಿಧಾನ:**

ಅರ್ಜಿಯನ್ನು On-line ಮುಖಾಂತರ ಅಭ್ಯರ್ಥಿಗಳು ಸಲ್ಲಿಸತಕ್ಕದ್ದು. On-line ಅರ್ಜಿ, ಅಧಿಸೂಚನೆ ಇವುಗಳನ್ನು ಇಲಾಖಾ ವೆಬ್‌ಸೈಟ್: www.aranya.gov.in ನಲ್ಲಿ ಪ್ರಕಟಪಡಿಸಲಾಗುವುದು. ಇದನ್ನು ಹೊರತುಪಡಿಸಿ ಯಾವುದೇ ವಿಧದಲ್ಲಿ ಅರ್ಜಿಯನ್ನು ಸಲ್ಲಿಸಲು ಅವಕಾಶವಿರುವುದಿಲ್ಲ. On-line ಅರ್ಜಿಯನ್ನು ತುಂಬಲು ಸಹಾಯಕವಾಗುವ ಸೂಚನೆಗಳನ್ನು ಇಲಾಖಾ ವೆಬ್‌ಸೈಟ್‌ನಲ್ಲಿ ನೀಡಲಾಗುವುದು. ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ ಭರ್ತಿ ಮಾಡಿದ ಆನ್‌ಲೈನ್ ಅರ್ಜಿಯ ಒಂದು ಜೆರಾಕ್ಸ್ ಪ್ರತಿಯನ್ನು ತೆಗೆದು ತಮ್ಮ ಬಳಿ ಇಟ್ಟುಕೊಳ್ಳತಕ್ಕದ್ದು. **On-line ಅರ್ಜಿಯ ಪ್ರತಿಯನ್ನು ಅಂಚೆ ಮುಖಾಂತರ, ಮುದ್ದಾಂ ಆಗಿ ಅಥವಾ ಇನ್ನಿತರ ವಿಧದಲ್ಲಿ ಇಲಾಖೆಗೆ ಸಲ್ಲಿಸಬೇಕಾದ ಅವಶ್ಯಕತೆ ಇರುವುದಿಲ್ಲ.**

**1.1** On-line ಮುಖಾಂತರ ಅರ್ಜಿಯನ್ನು **ದಿನಾಂಕ 14-09-2015 ರಿಂದ 13-10-2015 ರಂದು ಅಪರಾಹ್ನ 4.30 ಗಂಟೆಯವರೆಗೆ ಸಲ್ಲಿಸಬಹುದಾಗಿರುತ್ತದೆ.**

**1.2 ಅರ್ಜಿ ಶುಲ್ಕ:**

ಸಾಮಾನ್ಯ ವರ್ಗ, IIA, IIB, IIIA, IIIB ಪ್ರವರ್ಗಗಳಿಗೆ ಸೇರಿದ ಅಭ್ಯರ್ಥಿಗಳಿಗೆ ಅರ್ಜಿ ಶುಲ್ಕ ರೂ.100-00 + ಸೇವಾ ಶುಲ್ಕ ರೂ.12-00; ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಪ್ರವರ್ಗ-1 ಕ್ಕೆ ಸೇರಿದ ಅಭ್ಯರ್ಥಿಗಳಿಗೆ ಅರ್ಜಿ ಶುಲ್ಕ ರೂ.50-00 + ಸೇವಾ ಶುಲ್ಕ ರೂ.12-00 ಆಗಿರುತ್ತದೆ. On-line ನಲ್ಲಿ ಅರ್ಜಿ ಸಲ್ಲಿಸಿದ ನಂತರ, ಮುದ್ರಿತ ಅರ್ಜಿ ಪ್ರತಿಯನ್ನು ತೆಗೆದುಕೊಂಡು ಇ-ಪಾವತಿ ಸೌಲಭ್ಯವಿರುವ ಅಂಚೆ ಕಚೇರಿಯಲ್ಲಿ ಮುದ್ರಿತ ಅರ್ಜಿ ಪ್ರತಿಯನ್ನು ತೋರಿಸಿ, ಈ ಮೇಲೆ ಹೇಳಿರುವ ಅರ್ಜಿ ಶುಲ್ಕ ಮತ್ತು ಸೇವಾ ಶುಲ್ಕವನ್ನು ಅಭ್ಯರ್ಥಿಗಳು ಪಾವತಿಸತಕ್ಕದ್ದು.ಆನ್‌ಲೈನ್ ಅರ್ಜಿಯ ಪ್ರತಿ ಮತ್ತು ಅಂಚೆ ಕಚೇರಿಯಲ್ಲಿ ಅರ್ಜಿ ಶುಲ್ಕ ಪಾವತಿಸಿದ ರಶೀತಿಯನ್ನು ಅಭ್ಯರ್ಥಿಗಳು ತಮ್ಮ ಬಳಿ ಇಟ್ಟುಕೊಳ್ಳತಕ್ಕದ್ದು. ಅರ್ಜಿ ಶುಲ್ಕವನ್ನು ಪಾವತಿಸಲು **ದಿನಾಂಕ 14-09-2015 ರಿಂದ 16-10-2015 ರವರೆಗೆ ನಿಗದಿಪಡಿಸಲಾಗಿದೆ.**

1.3 ಅರ್ಜಿ ಸಲ್ಲಿಸುವಾಗ ಜನ್ಮ ದಿನಾಂಕ ದೃಢೀಕರಿಸುವ ಪ್ರಮಾಣ ಪತ್ರ, ಶೈಕ್ಷಣಿಕ ಪ್ರಮಾಣ ಪತ್ರಗಳು, ಜಾತಿ/ಪ್ರವರ್ಗ ದೃಢೀಕರಿಸುವ ಪ್ರಮಾಣ ಪತ್ರಗಳು, ಸೈನಿಕ ಸೇವೆ ದೃಢೀಕರಣ ಪ್ರಮಾಣ ಪತ್ರ, ಸ್ವಗ್ರಾಮ ಪ್ರಮಾಣ ಪತ್ರ ಇವುಗಳನ್ನು ಅಭ್ಯರ್ಥಿಗಳು ಪಡೆದಿಟ್ಟುಕೊಂಡಿರತಕ್ಕದ್ದು. ಈ ಮೂಲ

ದಾಖಲೆಗಳನ್ನು **ಅಥವಾ ಇವುಗಳ ಜೆರಾಕ್ಸ್ ಪ್ರತಿಗಳನ್ನು ಸಲ್ಲಿಸುವ ಅವಶ್ಯಕತೆ ಇರುವುದಿಲ್ಲ.** ಜೆರಾಕ್ಸ್ ಮತ್ತು ಮೂಲ ದಾಖಲೆಗಳನ್ನು ಇಲಾಖೆ ಅಪೇಕ್ಷಿಸಿದಾಗ ಮಾತ್ರ ಸಲ್ಲಿಸತಕ್ಕದ್ದು.

1.4 1:20 (ಹುದ್ದೆ:ಅಭ್ಯರ್ಥಿ) ಅರ್ಹ ಅಭ್ಯರ್ಥಿಗಳಿಗೆ ಪ್ರವೇಶ ಪತ್ರ ಮತ್ತು ಮೂಲ ದಾಖಲೆಗಳ ಪರಿಶೀಲನೆ, ದೇಹದಾರ್ಢ್ಯತೆ, ದೈಹಿಕ ತಾಳ್ವಿಕೆ ಮತ್ತು ಲಿಖಿತ ಪರೀಕ್ಷೆ ನಡೆಯುವ ಸ್ಥಳ ಮತ್ತು ವೇಳೆಯನ್ನು ಇಲಾಖಾ ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗುವುದು.1:20 ಪಟ್ಟಿಯಲ್ಲಿರುವ ಅಭ್ಯರ್ಥಿಗಳು ತಮ್ಮ ಪ್ರವೇಶ ಪತ್ರವನ್ನು ಇಲಾಖಾ ವೆಬ್‌ಸೈಟ್‌ನಿಂದ ಡೌನ್‌ಲೋಡ್ ಮಾಡುವುದು. ಇದನ್ನು ಹೊರತುಪಡಿಸಿ ಅಂಚೆ ಮುಖಾಂತರ ಪ್ರವೇಶ ಪತ್ರವನ್ನು ಕಳುಹಿಸಲಾಗುವುದಿಲ್ಲ.

**ಸೂಚನೆ:–On-line ನಲ್ಲಿ ಅರ್ಜಿಯನ್ನು ಸಲ್ಲಿಸದೇ ನೇರವಾಗಿ ಕೊರಿಯರ್, ನೋಂದಾಯಿತ ಅಂಚೆ, ಸಾಧಾರಣ ಅಂಚೆ, ಮುದ್ದಾಂ ಇತ್ಯಾದಿ ವಿಧಾನಗಳ ಮುಖಾಂತರ ಕಳುಹಿಸಿದ ಅರ್ಜಿಗಳನ್ನು ಅರಣ್ಯ ಇಲಾಖೆಯ ಯಾವುದೇ ಕಚೇರಿಗಳಲ್ಲಿ ಸ್ವೀಕರಿಸಲಾಗುವುದಿಲ್ಲ.**

**2.0 ಹುದ್ದೆಯ ಮೀಸಲಾತಿ ವರ್ಗೀಕರಣ:**

ಹೈದರಾಬಾದ್–ಕರ್ನಾಟಕ ಪ್ರದೇಶದ ಉಪ ವಲಯ ಅರಣ್ಯಾಧಿಕಾರಿ ಖಾಲಿ ಹುದ್ದೆಗಳ ಮೀಸಲಾತಿ ವರ್ಗೀಕರಣ ಈ ಕೆಳಗಿನಂತಿದೆ. ಅವಶ್ಯಕತೆ ಮತ್ತು ಸಂದರ್ಭಕ್ಕೆ ಅನುಗುಣವಾಗಿ ಇದನ್ನು ಬದಲಾವಣೆ ಮಾಡಿಕೊಳ್ಳಬಹುದಾಗಿದೆ.

**2.1 ಉಪ ವಲಯ ಅರಣ್ಯಾಧಿಕಾರಿ ಹುದ್ದೆ:–ಒಟ್ಟು 19 ಹುದ್ದೆಗಳು.**

**2.1.1 ಹೈದರಾಬಾದ್–ಕರ್ನಾಟಕ ಪ್ರದೇಶದ ಒಟ್ಟು 19 ಹುದ್ದೆಗಳ ಮೀಸಲಾತಿ ವರ್ಗೀಕರಣ:–**

**ಬಿ.ಎಸ್‌ಸಿ (ಅರಣ್ಯ ಶಾಸ್ತ್ರ) ಪದವೀಧರರಿಗೆ ಲಭ್ಯವಾಗುವ 10 ಹುದ್ದೆಗಳ ಮೀಸಲಾತಿ ವರ್ಗೀಕರಣ:–**

| ಪ್ರವರ್ಗ | ಸಮತಳ ಮೀಸಲಾತಿ | | | | | | ಒಟ್ಟು |
|---|---|---|---|---|---|---|---|
| | ಇತರೆ | ಮಾಜಿ ಸೈನಿಕ | ಕುಷ್ಠರೋಗದಿಂದ ಗುಣಮುಖ ಹೊಂದಿದ ಅಭ್ಯರ್ಥಿ | ಯೋಜನೆಗಳಿಂದ ನಿರಾಶ್ರಿತಗೊಂಡ ಕುಟುಂಬದ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿ | |
| ಸಾಮಾನ್ಯ ಅರ್ಹತೆ | 4 | | 1 | | 2 | | **7** |
| ಪ್ರವರ್ಗ–I | 1 | | | | | | **1** |
| ಪ್ರವರ್ಗ–II(ಎ) | 2 | | | | | | **2** |
| **ಒಟ್ಟು:** | **7** | | **1** | | **2** | | **10** |

**2.1.2ವಿಜ್ಞಾನ ಪದವೀಧರರಿಗೆ ಲಭ್ಯವಾಗುವ 9 ಹುದ್ದೆಗಳ ಮೀಸಲಾತಿ ವರ್ಗೀಕರಣ:–**

| ಪ್ರವರ್ಗ | ಸಮತಳ ಮೀಸಲಾತಿ | | | | | | ಒಟ್ಟು |
|---|---|---|---|---|---|---|---|
| | ಇತರೆ | ಮಾಜಿ ಸೈನಿಕ | ಕುಷ್ಠರೋಗದಿಂದ ಗುಣಮುಖ ಹೊಂದಿದ ಅಭ್ಯರ್ಥಿ | ಯೋಜನೆಗಳಿಂದ ನಿರಾಶ್ರಿತಗೊಂಡ ಕುಟುಂಬದ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿ | |
| ಸಾಮಾನ್ಯ ಅರ್ಹತೆ | 3 | | 1 | | 2 | | **6** |
| ಪ್ರವರ್ಗ–I | 1 | | | | | | **1** |
| ಪ್ರವರ್ಗ–II(ಎ) | 2 | | | | | | **2** |
| **ಒಟ್ಟು:** | **6** | | **1** | | **2** | | **9** |

***ಷರಾ:–** ಈ ಕಚೇರಿಯ ಅಧಿಕೃತ ಜ್ಞಾಪನಾ ಪತ್ರ ಸಂಖ್ಯೆ: ಬಿ3–ಸಿಬ್ಬಂದಿ–ವಿವ–103/2013–14 ದಿನಾಂಕ 3–8–2015 ರಂದು ಹೊರಡಿಸಿರುವ ಆದೇಶದಂತೆ ಮೀಸಲಾತಿಗಳನ್ನು ನಿಗದಿಪಡಿಸಲಾಗಿದೆ.

**ವಿಶೇಷ ಸೂಚನೆ:–**(1) ಭಾರತ ಸಂವಿಧಾನದ ಅನುಚ್ಛೇದ 371(ಜೆ) ಅನುಷ್ಠಾನಕ್ಕೆ ಸಂಬಂಧಿಸಿದಂತೆ, ಹೊರಡಿಸಲಾದ ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ 2013 ಹಾಗೂ ಸದರಿ ಆದೇಶಕ್ಕೆ ಸಂಬಂಧಿಸಿದಂತೆ ಹೊರಡಿಸಲಾದ ತಿದ್ದುಪಡಿಯಂತೆ ಮೀಸಲಾತಿಗೆಂದು ಗುರುತಿಸಿ, ಸ್ಥಳೀಯ ವೃಂದಕ್ಕೆ ಒಳಪಡುವ ಹುದ್ದೆಗಳನ್ನು ಪ್ರತ್ಯೇಕವಾಗಿ ನೀಡಲಾಗಿರುತ್ತದೆ. ಸ್ಥಳೀಯ ವೃಂದದ ಹುದ್ದೆಗಳನ್ನು ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ 2013ರ ಕಂಡಿಕೆ 2(1)(ಎಫ್) ಅರ್ಥ ವಿವರಣೆಯ ಅಡಿಯಲ್ಲಿ ವರ್ಗೀಕರಿಸಲು ಅರ್ಹವಿರುವ ಅಭ್ಯರ್ಥಿಗಳಿಂದ ಮಾತ್ರ ತುಂಬಲಾಗುವುದು. ಈ ಹಿನ್ನೆಲೆಯಲ್ಲಿ ಸ್ಥಳೀಯ ವೃಂದದಲ್ಲಿ ಲಭ್ಯವಿರುವ ಹುದ್ದೆಗಳಿಗೆ ಅರ್ಜಿ ಸಲ್ಲಿಸಲು ಸಾರ್ವಜನಿಕ ಉದ್ಯೋಗ ಆದೇಶದಂತೆ ಅರ್ಹ ಸ್ಥಳೀಯ ಅಭ್ಯರ್ಥಿಗಳು ಮಾತ್ರ ಅರ್ಹರಿರುತ್ತಾರೆ. ಪರಂತು, ಮಿಕ್ಕುಳಿದ ವೃಂದದಲ್ಲಿ ಲಭ್ಯವಿರುವ ಖಾಲಿ ಹುದ್ದೆಗಳಿಗೆ ಇತರರೊಂದಿಗೆ ಸ್ಥಳೀಯ ವ್ಯಕ್ತಿಗಳು ಸಹ ಅರ್ಜಿ ಸಲ್ಲಿಸಲು ಅವಕಾಶ ಕಲ್ಪಿಸಲಾಗಿರುತ್ತದೆ.

**ವಿಶೇಷ ಸೂಚನೆ:–**ಸರ್ಕಾರಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 52 ಎಸ್‌ಆರ್‌ಆರ್ 99 ದಿನಾಂಕ 29–11–2002 ರ ಪ್ರಕಾರ ಉಪ ವಲಯ ಅರಣ್ಯಾಧಿಕಾರಿ ಹುದ್ದೆಗಳಿಗೆ ನೇರ ನೇಮಕಾತಿ ಮೂಲಕ ಅಭ್ಯರ್ಥಿಗಳನ್ನು ಭರ್ತಿ ಮಾಡುವ ಸಂದರ್ಭದಲ್ಲಿ ಅಂಗವಿಕಲ ಅಭ್ಯರ್ಥಿಗಳಿಗೆ ಮೀಸಲಾಗಿರುವ ಮೀಸಲಾತಿಯಡಿಯಲ್ಲಿ ಅಂಗವಿಕಲ ಅಭ್ಯರ್ಥಿಗಳ ಬದಲು **ಕುಷ್ಠರೋಗದಿಂದ ಗುಣಮುಖರಾಗಿರುವ** ಅಭ್ಯರ್ಥಿಗಳನ್ನು ಮಾತ್ರ ಭರ್ತಿ ಮಾಡಲು ಅವಕಾಶವಿರುತ್ತದೆ. **ಕುಷ್ಠರೋಗದಿಂದ ಗುಣಮುಖರಾಗಿರುವ** ಅಭ್ಯರ್ಥಿಗಳಿಗೆ ಯಾವುದೇ ರೀತಿಯ ಅಂಗವಿಕಲತೆ ಇರಕೂಡದು.

**ವಿವರಣೆ:–** "ಕುಷ್ಠರೋಗದಿಂದ ಗುಣಮುಖರಾಗಿರುವವರು (leprosy cured)" ಎಂದರೆ ಕರ್ನಾಟಕ ನಾಗರಿಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರಲ್ಲಿ ಅರ್ಥೈಸಿರುವಂತಾಗಿದೆ. ಈ ಪದದ ಅರ್ಥ ವಿವರಣೆ ಈ ಕೆಳಕಂಡಂತಿದೆ:–

Leprosy cured means any person who has been cured of leprosy but is suffering from

(i) loss of sensation in hands or feet as well as loss of sensation and paresis in the eye and eye-lid but with no manifest deformity;

(ii) manifest deformity and paresis but having sufficient mobility in their hands and feet to enable them to engage in normal economic activity;

(iii) extreme physical deformity as well as advanced age which prevents him from undertaking any gainful occupation;

and the expression "leprosy cured" shall be construed accordingly.

**3.0 ಅರ್ಹತೆ ಮತ್ತು ನಿಬಂಧನೆಗಳು:**

**3.1 ವಿದ್ಯಾರ್ಹತೆ:** ಅಧಿಸೂಚನೆಯ ದಿನಾಂಕಕ್ಕೆ ಈ ಕೆಳಕಂಡ ವಿದ್ಯಾರ್ಹತೆಯನ್ನು ಅಭ್ಯರ್ಥಿಯು ಹೊಂದಿರಬೇಕು.

**ಉಪ ವಲಯ ಅರಣ್ಯಾಧಿಕಾರಿ ಹುದ್ದೆ:**–ಅಭ್ಯರ್ಥಿಯು ಸರ್ಕಾರದಿಂದ ಮಾನ್ಯತೆ ಪಡೆದ ವಿಶ್ವವಿದ್ಯಾನಿಲಯದಲ್ಲಿ ಬಿ.ಎಸ್‌ಸಿ.(ಫಾರೆಸ್ಟ್ರಿ) ವಿಷಯದಲ್ಲಿ ಅಥವಾ ಬಿ.ಎಸ್‌ಸಿ.ಯಲ್ಲಿ ಪದವೀಧರರಾಗಿರಬೇಕು.ಬಿ.ಎಸ್‌ಸಿ. ಪದವೀಧರರು ಭೌತಶಾಸ್ತ್ರ (Physics), ರಸಾಯನಶಾಸ್ತ್ರ (Chemistry), ಗಣಿತಶಾಸ್ತ್ರ (Mathematics), ಸಸ್ಯಶಾಸ್ತ್ರ (Botany), ಪ್ರಾಣಿಶಾಸ್ತ್ರ (Zoology), ಭೂಗರ್ಭಶಾಸ್ತ್ರ (Geology),Micro Biology, Bio-Technology, Bio-Chemistry ಈ ಐಚ್ಛಿಕ ಪಠ್ಯಕ್ರಮಗಳಲ್ಲಿ ಯಾವುದಾದರೂ ಎರಡು ಅಥವಾ ಹೆಚ್ಚಿನ ಪಠ್ಯಕ್ರಮಗಳನ್ನು ಎಲ್ಲಾ ಸೆಮಿಸ್ಟರುಗಳಲ್ಲಿ ಅಭ್ಯಾಸ ಮಾಡಿರಬೇಕು.

**3.2 ವಯೋಮಿತಿ:**

ಅಧಿಸೂಚನೆಯ ದಿನಾಂಕಕ್ಕೆ ಅಭ್ಯರ್ಥಿಯು **ಕನಿಷ್ಠ 18 ವರ್ಷ** ವಯಸ್ಸನ್ನು ಪೂರೈಸಿರತಕ್ಕದ್ದು.

ಅಧಿಸೂಚನೆಯ ದಿನಾಂಕಕ್ಕೆ ಗರಿಷ್ಠ ವಯೋಮಿತಿ ವಿವರಗಳು ಕೆಳಗಿನಂತಿದೆ:–

| | | |
|---|---|---|
| **3.2.1** | ಪರಿಶಿಷ್ಠ ಜಾತಿ, ಪರಿಶಿಷ್ಠ ಪಂಗಡ ಮತ್ತು ಪ್ರವರ್ಗ–I: | ಗರಿಷ್ಠ ವಯೋಮಿತಿ 30 ವರ್ಷಗಳು |
| | ಪ್ರವರ್ಗ IIಎ, IIಬಿ, IIIಎ, IIIಬಿ: | ಗರಿಷ್ಠ ವಯೋಮಿತಿ 28 ವರ್ಷಗಳು |
| | ಸಾಮಾನ್ಯ ಅರ್ಹತೆ: | ಗರಿಷ್ಠ ವಯೋಮಿತಿ 25 ವರ್ಷಗಳು |

| | | |
|---|---|---|
| **3.2.2** | **ಅರಣ್ಯ ಪ್ರೇರಕರಿಗೆ ವಯೋಮಿತಿ:** ಅಧಿಸೂಚನೆ ದಿನಾಂಕಕ್ಕೆ ಕನಿಷ್ಠ 5 ವರ್ಷಗಳ ಸೇವೆಯನ್ನು ಅರಣ್ಯ ಪ್ರೇರಕರಾಗಿ ಪೂರೈಸಿದ್ದು ಪ್ರಸ್ತುತ ಅರಣ್ಯ ಪ್ರೇರಕರಾಗಿ ಸೇವೆಯಲ್ಲಿ ಮುಂದುವರೆದಿದ್ದಲ್ಲಿ ಮಾತ್ರ ಕೆಳಗಿನ ಗರಿಷ್ಠ ವಯೋಮಿತಿ ಅನ್ವಯವಾಗುವುದು. | |
| | ಪರಿಶಿಷ್ಠ ಜಾತಿ, ಪರಿಶಿಷ್ಠ ಪಂಗಡ ಮತ್ತು ಪ್ರವರ್ಗ–I: | ಗರಿಷ್ಠ ವಯೋಮಿತಿ 43 ವರ್ಷಗಳು |
| | ಪ್ರವರ್ಗ IIಎ, IIಬಿ, IIIಎ, IIIಬಿ: | ಗರಿಷ್ಠ ವಯೋಮಿತಿ 41 ವರ್ಷಗಳು |
| | ಸಾಮಾನ್ಯ ಅರ್ಹತೆ: | ಗರಿಷ್ಠ ವಯೋಮಿತಿ 38 ವರ್ಷಗಳು |

| | | |
|---|---|---|
| **3.2.3** | **ಮಾಜಿ ಸೈನಿಕರಿಗೆ ವಯೋಮಿತಿ:** | ಸಶಸ್ತ್ರ ಪಡೆಗಳಲ್ಲಿ ಸೇವೆ ಸಲ್ಲಿಸಿ ನಿಯಮಾನುಸಾರ ನಿವೃತ್ತಿ / ಡಿಮೊಬಿಲೈಸೇಷನ್ (Demobilisation) ಅಥವಾ ರಿಟ್ರೆಂಚ್‌ಮೆಂಟ್ (Retrenchment) ಹೊಂದಿದ ಮಾಜಿ ಸೈನಿಕ ಅಭ್ಯರ್ಥಿಗಳಿಗೆ ಅವರು ಯಾವ ಪ್ರವರ್ಗಕ್ಕೆ ಸೇರಿರುತ್ತಾರೆಯೊ ಆ ಪ್ರವರ್ಗಕ್ಕೆ ಮೇಲಿನ ಸಂಖ್ಯೆ: **3.2.1** ರಲ್ಲಿ ನಿಗದಿಪಡಿಸಿದ ಗರಿಷ್ಠ ವಯೋಮಿತಿಗೆ ಅವರು ಎಷ್ಟು ವರ್ಷ ಸಶಸ್ತ್ರ ಪಡೆಗಳಲ್ಲಿ ಸೇವೆ ಸಲ್ಲಿಸಿರುವರೋ ಅಷ್ಟು ವರ್ಷಗಳಿಗೆ ಮೂರು (3) ವರ್ಷ ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳ ಸಡಿಲಿಕೆಯನ್ನು ನೀಡಲಾಗುವುದು. |

**ವಿವರಣೆ: "**ಮಾಜಿ ಸೈನಿಕ**"** ಎಂದರೆ ಕರ್ನಾಟಕ ನಾಗರಿಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977 ರಲ್ಲಿ ಅರ್ಥೈಸಿರುವಂತಾಗಿದೆ. ಈ ಪದದ ಅರ್ಥ ವಿವರಣೆ ಈ ಕೆಳಕಂಡಂತಿದೆ:–

ಕರ್ನಾಟಕ ನಾಗರಿಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 2(1)(**i**):

**"Ex-Serviceman"**means a person, who has served in any rank (whether as a combatant or as non-combatant) in the regular Army, Navy and Air Force of the Union but does not include a person who has served in the Defence Security Corps, the General Reserve Engineering Force, the Lok Sahayak Sena and the Para Military Force; and

(a) who has retired from such service after earning his pension; or

(b) who has been released from such service on medical grounds attributable to military service or circumstances beyond his control and awarded medical or other disability pension; or

(c) who has been released otherwise than on his own request from such service as a result of reduction in establishment; or

(d) who has been released from such service after completing the specific period of engagement otherwise than at his own request or by way of dismissal or discharge on account of misconduct or inefficiency and has been given a gratuity;

and includes personnel of the Territorial Army of the following categories, namely:-

(i) pension holders for continuous embodied service;

(ii) persons with disability attributable to military service; and

(iii) gallantry award winners.

**Explanation:** The persons serving in the armed forces of the union, who on retirement from service, would come under the category of "Ex-Serviceman" may be permitted to apply for re-employment one year before the completion of the specified terms of engagement and avail themselves of all concessions available to ex-servicemen, but shall not be appointed to a State Civil Service or Post until they are permitted to leave the uniform.

**4.0 ಅರ್ಜಿ ಸಲ್ಲಿಸುವ ವಿಧಾನ**

ಅರ್ಜಿಯನ್ನು On-line ಮುಖಾಂತರ ಅಭ್ಯರ್ಥಿಗಳು ಸಲ್ಲಿಸತಕ್ಕದ್ದು.ಇದನ್ನು ಹೊರತುಪಡಿಸಿ ಯಾವುದೇ ವಿಧದಲ್ಲಿ ಅರ್ಜಿಯನ್ನು ಸಲ್ಲಿಸಲು ಅವಕಾಶವಿರುವುದಿಲ್ಲ. ಒಬ್ಬ ಅಭ್ಯರ್ಥಿ ಒಂದಕ್ಕಿಂತ ಹೆಚ್ಚು ಅರ್ಜಿಗಳನ್ನು On-line ಮುಖಾಂತರ ಸಲ್ಲಿಸಬಾರದು.

**5.0** ಅರ್ಜಿಯ ಜೊತೆಗೆ ಯಾವುದೇ ಮೂಲ/ನಕಲು/ಜೆರಾಕ್ಸ್ ದಾಖಲಾತಿಗಳು, ಪ್ರಮಾಣ ಪತ್ರಗಳು, ಇತ್ಯಾದಿಗಳನ್ನು ಸಲ್ಲಿಸಬೇಕಾಗಿರುವುದಿಲ್ಲ. ಅಭ್ಯರ್ಥಿಯು ಅರ್ಜಿಯನ್ನು ಸಲ್ಲಿಸುವ ಮೊದಲು, ಸಂಬಂಧಿಸಿದ ಪ್ರಾಧಿಕಾರಗಳಿಂದ ಅವಶ್ಯಕವಿರುವ ಎಲ್ಲಾ ಮೂಲ ದಾಖಲೆ/ಪ್ರಮಾಣ ಪತ್ರಗಳನ್ನು ಪಡೆದಿಟ್ಟುಕೊಂಡು, ಸದರಿ ಮೂಲ ದಾಖಲೆ/ಪ್ರಮಾಣ ಪತ್ರಗಳಲ್ಲಿರುವ ಮಾಹಿತಿಯನ್ನು ಸರಿಯಾಗಿ, ಸ್ಪಷ್ಟವಾಗಿ ಮತ್ತು ಸಮರ್ಪಕವಾಗಿ ನಿಗದಿತ ಅರ್ಜಿಯಲ್ಲಿ ಭರ್ತಿ ಮಾಡಿ ಸಲ್ಲಿಸತಕ್ಕದ್ದು. **ಇತರೆ ನಮೂನೆಗಳಲ್ಲಿ ಅಥವಾ ಜೆರಾಕ್ಸ್ ಪ್ರತಿಗಳಲ್ಲಿ ಭರ್ತಿ ಮಾಡಿ ಸಲ್ಲಿಸುವ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.** ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ ಭರ್ತಿ ಮಾಡಿದ ಮೂಲ ಅರ್ಜಿಯ ಒಂದು ಜೆರಾಕ್ಸ್ ಪ್ರತಿ ಮತ್ತು ಶುಲ್ಕ ಪಾವತಿಸಿದ ರಶೀತಿಯನ್ನು ತೆಗೆದು ತಮ್ಮ ಬಳಿ ಇಟ್ಟುಕೊಳ್ಳತಕ್ಕದ್ದು.

**6.0 ಸ್ವೀಕೃತ ಅರ್ಜಿಗಳ ಪರಾಮರ್ಶೆ/ನೇಮಕಾತಿ ವಿಧಾನ**

ಕರ್ನಾಟಕ ಅರಣ್ಯ ಇಲಾಖಾ ಸೇವೆಗಳು (ನೇಮಕಾತಿ)(ತಿದ್ದುಪಡಿ) ನಿಯಮಗಳು, 2012ರ ಮತ್ತು ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ನಿಯಮ, 2013ರ ನಿಯಮಗಳ ಅನ್ವಯ ಅರಣ್ಯ ಇಲಾಖೆಯ ಹೈದರಾಬಾದ್–ಕರ್ನಾಟಕ ಪ್ರದೇಶ ವ್ಯಾಪ್ತಿಯ ಉಪ ವಲಯ ಅರಣ್ಯಾಧಿಕಾರಿ ಖಾಲಿ ಇರುವ ಒಟ್ಟು ಹುದ್ದೆಗಳನ್ನು ಹಾಗೂ ಈ ಕಚೇರಿಯ ಅಧಿಕೃತ ಜ್ಞಾಪನಾ ಪತ್ರ ಸಂಖ್ಯೆ: ಬಿ3–ಸಿಬ್ಬಂದಿ–ವಿವ–103/2013–14 ದಿನಾಂಕ 3–8–2015 ರಲ್ಲಿ ಭಾರತ ಸಂವಿಧಾನದ ಅನುಚ್ಛೇದ 371(ಜೆ) ಅನ್ವಯ ಅನುಷ್ಠಾನಗೊಳಿಸುವಾಗ ಸ್ಥಳೀಯ ವೃಂದವನ್ನು ರಚಿಸಿ, ಸ್ಥಳೀಯ ವ್ಯಕ್ತಿಗಳನ್ನು ಸ್ಥಳೀಯ ವೃಂದಕ್ಕೆ ಹಂಚಿಕೆ ಮಾಡಿ ರೋಸ್ಟರ್ ಬಿಂದುಗಳನ್ನು ಸರಿದೂಗಿಸುವ ಬಗ್ಗೆ ಕ್ರಮ ಕೈಗೊಳ್ಳಲಾಗಿರುತ್ತದೆ. ಇದನ್ನು ಪರಿಗಣನೆಗೆ ತೆಗೆದುಕೊಂಡು ಹಾಗೂ ಪ್ರಸ್ತುತ ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಾನುಸಾರ ಉಪ ವಲಯ ಅರಣ್ಯಾಧಿಕಾರಿ ಹುದ್ದೆಗೆ ಮೀಸಲಾತಿ ವರ್ಗೀಕರಣ ಮಾಡಲಾಗಿದೆ. ಈ ಹುದ್ದೆಗೆ ಸ್ವೀಕರಿಸಲಾಗುವ ಎಲ್ಲಾ ಅರ್ಹ ಅರ್ಜಿಗಳನ್ನು, ಹೈದರಾಬಾದ್–ಕರ್ನಾಟಕ ಪ್ರದೇಶ ಮಟ್ಟದಲ್ಲಿ ಬಿ.ಎಸ್‌ಸಿ. (ಫಾರೆಸ್ಟ್ರಿ) ಮತ್ತು ಬಿ.ಎಸ್‌ಸಿ. ಪದವೀಧರರ ಅರ್ಜಿಗಳನ್ನು ಪ್ರತ್ಯೇಕವಾಗಿ ಕ್ರೋಢೀಕರಿಸಿ, ನಿಗದಿತ ನಮೂನೆಯ ಅರ್ಜಿಯಲ್ಲಿ ಭರ್ತಿ ಮಾಡಿರುವ ಮಾಹಿತಿ/ವಿವರಗಳ ಆಧಾರದ ಅನ್ವಯ ಉಪ ವಲಯ ಅರಣ್ಯಾಧಿಕಾರಿ ಹುದ್ದೆಗೆ ನಿಗದಿಪಡಿಸಿದ ವಿದ್ಯಾರ್ಹತೆಯಲ್ಲಿ ಅಭ್ಯರ್ಥಿಗಳು ಗಳಿಸಿದ ಶೇಕಡವಾರು ಅಂಕಗಳ ಮೆರಿಟ್ ಆಧಾರದಲ್ಲಿ(ಎಲ್ಲಾ ವಾರ್ಷಿಕ/ಸೆಮಿಸ್ಟರ್ ಪರೀಕ್ಷೆಗಳ ಅಂಕಗಳು ಮತ್ತು ಎಲ್ಲಾ ಭಾಷಾ ವಿಷಯಗಳನ್ನು ಸೇರಿದಂತೆ) ಮತ್ತು ಮೀಸಲಾತಿ ಪ್ರವರ್ಗವಾರು 1:20 (ಹುದ್ದೆ : ಅಭ್ಯರ್ಥಿ) ಅನುಪಾತದಲ್ಲಿ ಮೂಲ ದಾಖಲೆಗಳ ಪರಿಶೀಲನೆ, ದೇಹದಾರ್ಢ್ಯತೆ ಪರೀಕ್ಷೆ ಮತ್ತು ದೈಹಿಕ ತಾಳ್ವಿಕೆ ಪರೀಕ್ಷೆಗೆ ಹಾಜರಾಗಲು ಬಿ.ಎಸ್‌ಸಿ. (ಫಾರೆಸ್ಟ್ರಿ) ಮತ್ತು ಬಿ.ಎಸ್‌ಸಿ.ಪದವೀಧರ ಅಭ್ಯರ್ಥಿಗಳ ಪ್ರತ್ಯೇಕ ಪಟ್ಟಿಯನ್ನು ಮಾಡಿ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು.

1:20 (ಹುದ್ದೆ: ಅಭ್ಯರ್ಥಿ) ಅನುಪಾತದ ಪಟ್ಟಿಯನ್ನು ಇಲಾಖಾ ವೆಬ್‌ಸೈಟ್: www.aranya.gov.in ನಲ್ಲಿ ಅಭ್ಯರ್ಥಿಗಳ ಮಾಹಿತಿಗಾಗಿ ಪ್ರಕಟಪಡಿಸಲಾಗುವುದು.

**ವಿಶೇಷ ಸೂಚನೆ:–** ಶೇಕಡಾವಾರು ಅಂಕಗಳನ್ನು ಲೆಕ್ಕ ಹಾಕುವಾಗ ಪಠ್ಯ ವಿಷಯದಲ್ಲಿನ ಯಾವುದೇ ವಿಷಯದ ಅಂಕಗಳನ್ನು ಹೊರತುಪಡಿಸಲಾಗುವುದಿಲ್ಲ. ನಿಗದಿಪಡಿಸಿರುವ ವಿದ್ಯಾರ್ಹತೆಯಲ್ಲಿ ಅಭ್ಯರ್ಥಿಯು ಗಳಿಸಿರುವ ಎಲ್ಲಾ ವಿಷಯಗಳಲ್ಲಿನ ಒಟ್ಟು ಅಂಕಗಳು ಮತ್ತು ಆಯಾ ಪರೀಕ್ಷಾ ಮಂಡಳಿ ನಿಗದಿಪಡಿಸಿರುವ ಗರಿಷ್ಠ ಅಂಕಗಳನ್ನು ಪರಿಗಣಿಸಿ ಅಭ್ಯರ್ಥಿಗಳ ಶೇಕಡವಾರು ಅಂಕಗಳನ್ನು ನಿಗದಿಪಡಿಸಲಾಗುವುದು.

1:20 (ಹುದ್ದೆ : ಅಭ್ಯರ್ಥಿ) ಅನುಪಾತದ ಪಟ್ಟಿಯಲ್ಲಿರುವ ಅಭ್ಯರ್ಥಿಗಳಿಗೆ ಮೂಲ ದಾಖಲೆ/ಪ್ರಮಾಣ ಪತ್ರಗಳ ಪರಿಶೀಲನೆ, ದೇಹದಾರ್ಢ್ಯತೆ ಮತ್ತು ದೈಹಿಕ ತಾಳ್ವಿಕೆ ಪರೀಕ್ಷೆಗಳಿಗೆ ಸೂಚಿತ ದಿನಾಂಕದಂದು ಹಾಜರಾಗಲು ತಿಳಿಸಲಾಗುವುದು. ಸದರಿ ಸೂಚಿತ ದಿನಾಂಕದಂದು ಅರ್ಹ ಅಭ್ಯರ್ಥಿಗಳು ಮೂಲ ದಾಖಲೆ/ಪ್ರಮಾಣ ಪತ್ರಗಳನ್ನು ಪರಿಶೀಲನೆಗೆ ಸಂಬಂಧಿಸಿದ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಹಾಗೂ ಪ್ರಾದೇಶಿಕ ಪರೀಕ್ಷಕರ ಎದುರು ಹಾಜರುಪಡಿಸಬೇಕು. ಮೂಲ ದಾಖಲೆ/ಪ್ರಮಾಣ ಪತ್ರಗಳ ಪರಿಶೀಲನೆಯಲ್ಲಿ ಅರ್ಜಿಯಲ್ಲಿ ನಮೂದಿಸಿರುವ ಮಾಹಿತಿ/ವಿವರಗಳಿಗೆ ಪೂರಕ ಮತ್ತು ಸರಿಯಾದ ಮೂಲ ದಾಖಲೆ/ಪ್ರಮಾಣ ಪತ್ರಗಳನ್ನು ಹಾಜರುಪಡಿಸಿದ ಅಭ್ಯರ್ಥಿಗಳು ಮಾತ್ರ ಶಾರೀರಿಕ ಮಾನದಂಡದ ಕುರಿತು ನಿಗದಿಪಡಿಸಿದ ದೇಹದಾರ್ಢ್ಯತೆ ಪರೀಕ್ಷೆಗೆ ಅರ್ಹತೆ ಹೊಂದುತ್ತಾರೆ. ದೇಹದಾರ್ಢ್ಯತೆ ಪರೀಕ್ಷೆಯಲ್ಲಿ ಅರ್ಹತೆ ಹೊಂದಿದವರು ಮಾತ್ರ ಮುಂದಿನ ಹಂತದ ದೈಹಿಕ ತಾಳ್ವಿಕೆ ಪರೀಕ್ಷೆಗೆ ಅರ್ಹತೆ ಹೊಂದುತ್ತಾರೆ. ದೈಹಿಕ ತಾಳ್ವಿಕೆ ಪರೀಕ್ಷೆಯಲ್ಲಿ ಅರ್ಹತೆ ಹೊಂದಿದ ಅಭ್ಯರ್ಥಿಗಳು ಮಾತ್ರ ನಿಗದಿಪಡಿಸಿರುವ ಲಿಖಿತ Aptitude ಪರೀಕ್ಷೆಗೆ ಹಾಜರಾಗಲು ಅರ್ಹರಾಗುತ್ತಾರೆ.

7. ನೇಮಕಾತಿಗಾಗಿ ಇಲಾಖೆಯು ನಡೆಸುವ ಲಿಖಿತ Aptitude ಪರೀಕ್ಷೆಯಲ್ಲಿ ಅಭ್ಯರ್ಥಿಗಳು ಪಡೆದ ಒಟ್ಟು ಅಂಕಗಳ ಶೇಕಡಾವಾರು ಪ್ರಮಾಣದ ಅರ್ಧ ಭಾಗ ಹಾಗೂ ಉಪ ವಲಯ ಅರಣ್ಯಾಧಿಕಾರಿ ಹುದ್ದೆಗೆ ನಿಗದಿಪಡಿಸಿದ ಶೈಕ್ಷಣಿಕ ವಿದ್ಯಾರ್ಹತೆಯಲ್ಲಿ (ಎಲ್ಲಾ ವಾರ್ಷಿಕ/ಸೆಮಿಸ್ಟರ್ ಪರೀಕ್ಷೆಗಳ ಅಂಕಗಳನ್ನು ಕೂಡಿ) ಅಭ್ಯರ್ಥಿಗಳು ಪಡೆದ ಒಟ್ಟು ಅಂಕಗಳ ಶೇಕಡಾವಾರು ಪ್ರಮಾಣದ ಅರ್ಧ ಭಾಗವನ್ನು ಕ್ರೋಢೀಕರಿಸಿ,ಅಭ್ಯರ್ಥಿಗಳು ಪಡೆದ ಅಂಕಗಳ ಮೆರಿಟ್ ಆಧಾರದಲ್ಲಿ ಮತ್ತು ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಗಳ ಅನ್ವಯಬಿ.ಎಸ್‌ಸಿ. (ಫಾರೆಸ್ಟ್ರಿ) ಮತ್ತು ಬಿ.ಎಸ್‌ಸಿ. ಪದವೀಧರ ಅಭ್ಯರ್ಥಿಗಳ ಮೆರಿಟ್ ಅನ್ನು ಪ್ರತ್ಯೇಕವಾಗಿ ಹೈದರಾಬಾದ್–ಕರ್ನಾಟಕ ಪ್ರದೇಶ ಮಟ್ಟದಲ್ಲಿ ನಿಗದಿಪಡಿಸಲಾಗುವುದು.

**8.0 ಮೂಲ ದಾಖಲೆ/ಪ್ರಮಾಣ ಪತ್ರಗಳ ಪರಿಶೀಲನೆ, ದೇಹದಾರ್ಢ್ಯತೆ, ದೈಹಿಕ ತಾಳ್ವಿಕೆ ಮತ್ತು ಲಿಖಿತ ಪರೀಕ್ಷೆಗಳು**

ಮೂಲ ದಾಖಲೆ/ಪ್ರಮಾಣ ಪತ್ರಗಳ ಪರಿಶೀಲನೆ, ದೇಹದಾರ್ಢ್ಯತೆ, ದೈಹಿಕ ತಾಳ್ವಿಕೆ ಮತ್ತು ಲಿಖಿತ ಪರೀಕ್ಷೆಗಳನ್ನು ಸಂಬಂಧಿಸಿದ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಹಾಗೂ ಪ್ರಾದೇಶಿಕ ಪರೀಕ್ಷಕರಿಂದ ಸಂಬಂಧಿಸಿದ ಪರೀಕ್ಷಾ ಕೇಂದ್ರಗಳಲ್ಲಿ ಸೂಚಿತ ದಿನಾಂಕಗಳಂದು ನಡೆಸಲಾಗುವುದು.

**8.1.1 ಮೂಲ ದಾಖಲೆ/ಪ್ರಮಾಣ ಪತ್ರಗಳ ಪರಿಶೀಲನೆ.**

1:20 (ಖಾಲಿ ಹುದ್ದೆ : ಅಭ್ಯರ್ಥಿ) ಅನುಪಾತದ ಪಟ್ಟಿಯಲ್ಲಿರುವ ಅಭ್ಯರ್ಥಿಗಳು ಅರ್ಜಿಯಲ್ಲಿ ನಮೂದಿಸಿರುವ ಎಲ್ಲಾ ಮಾಹಿತಿ/ವಿವರಗಳಿಗೆ ಪೂರಕವಾಗಿ ವಯಸ್ಸು, (ಜನ್ಮ ದಿನಾಂಕ ತಿಳಿಯಲು ಎಸ್.ಎಸ್.ಎಲ್.ಸಿ. ಅಂಕಪಟ್ಟಿ, ಶಾಲಾ ದಾಖಲಾತಿ ಪ್ರಮಾಣ ಪತ್ರಗಳು) ಶೈಕ್ಷಣಿಕ ಅರ್ಹತೆ, ಮೀಸಲಾತಿ, ಇತ್ಯಾದಿ ಬಗ್ಗೆ ಮೂಲ ದಾಖಲೆ/ಪ್ರಮಾಣ ಪತ್ರಗಳನ್ನು ಮತ್ತು ಇವುಗಳ ಒಂದು ಜೆರಾಕ್ಸ್ ಪ್ರತಿಯನ್ನು ಸೂಚಿತ ದಿನಾಂಕದಂದು ಸಂಬಂಧಿಸಿದ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಹಾಗೂ ಪ್ರಾದೇಶಿಕ ಪರೀಕ್ಷಕರ ಎದುರು ಪರಿಶೀಲನೆಗೆ ಕಡ್ಡಾಯವಾಗಿ ಹಾಜರುಪಡಿಸಬೇಕು. ಸದರಿ ಮೂಲ ದಾಖಲೆ/ಪ್ರಮಾಣ ಪತ್ರಗಳನ್ನು ಹಾಜರುಪಡಿಸಲು ಯಾವುದೇ ಕಾರಣಕ್ಕೂ ಮತ್ತು ಯಾವುದೇ ಸನ್ನಿವೇಶದಲ್ಲಿಯೂ ಕಾಲ ವಿಸ್ತರಣೆ ನೀಡಲಾಗುವುದಿಲ್ಲ. ಅಭ್ಯರ್ಥಿಯು ತನ್ನ ಅರ್ಜಿ ನಮೂನೆಯಲ್ಲಿ ನಮೂದಿಸಿರುವ ಮಾಹಿತಿ/ವಿವರಗಳನ್ನು ನಿಯಮಾನುಸಾರ ಪರಿಗಣಿಸಲಾಗುವುದು. ಒಂದು ವೇಳೆ ನಮೂದಿಸಿರುವ ಮಾಹಿತಿಗೆ ವ್ಯತಿರಿಕ್ತ ದಾಖಲೆ/ಪ್ರಮಾಣ ಪತ್ರಗಳನ್ನು ಸಲ್ಲಿಸಿದಲ್ಲಿ ಅಂತಹ ದಾಖಲೆ/ಪ್ರಮಾಣ ಪತ್ರಗಳನ್ನು ಪರಿಗಣನೆಗೆ ತೆಗೆದುಕೊಂಡು ಬದಲಾವಣೆ ಮಾಡಲಾಗುವುದಿಲ್ಲ. ಮೂಲ ದಾಖಲೆ/ಪ್ರಮಾಣ ಪತ್ರಗಳನ್ನು ಪರಿಶೀಲನೆಯ ಸಮಯದಲ್ಲಿ ಹಾಜರುಪಡಿಸದ ಅಭ್ಯರ್ಥಿಗಳ ಅಭ್ಯರ್ಥಿತನವನ್ನು ರದ್ದುಪಡಿಸಲಾಗುವುದು ಹಾಗೂ ಅವರನ್ನು ಮುಂದಿನ ಆಯ್ಕೆ ಪ್ರಕ್ರಿಯೆಯಿಂದ ಕೈಬಿಡಲಾಗುವುದು.

**8.1.2** ಅಭ್ಯರ್ಥಿಯು ಅರ್ಜಿಯನ್ನು ಭರ್ತಿ ಮಾಡುವಾಗ ಉಪ ವಲಯ ಅರಣ್ಯಾಧಿಕಾರಿ ಹುದ್ದೆಗೆ ನಿಗದಿಪಡಿಸಿರುವ ಶೈಕ್ಷಣಿಕ ವಿದ್ಯಾರ್ಹತೆಯಲ್ಲಿ ಆಯಾ ವಿಶ್ವವಿದ್ಯಾನಿಲಯವು ನಿಗದಿಪಡಿಸಿರುವ ಗರಿಷ್ಠ ಅಂಕಗಳನ್ನು ಹಾಗೂ ಅಭ್ಯರ್ಥಿಯು ಎಲ್ಲಾ ವಿಷಯಗಳಲ್ಲಿ ಗಳಿಸಿರುವ ಒಟ್ಟು ಅಂಕಗಳನ್ನು (ಎಲ್ಲಾ ವಾರ್ಷಿಕ/ಸೆಮಿಸ್ಟರ್ ಪರೀಕ್ಷೆಗಳ ಅಂಕಗಳನ್ನು ಕೂಡಿ) ತನ್ನ ಅರ್ಜಿಯಲ್ಲಿ ಸರಿಯಾಗಿ ಮತ್ತು ಸ್ಪಷ್ಟವಾಗಿ ನಮೂದಿಸುವುದು. ಅಸ್ಪಷ್ಟ/ತಪ್ಪು/ಅಪೂರ್ಣ ಮಾಹಿತಿ ನೀಡಿದ್ದಲ್ಲಿ ಅಭ್ಯರ್ಥಿಯ ಅಭ್ಯರ್ಥಿತನವನ್ನು ರದ್ದುಪಡಿಸಲಾಗುವುದು ಹಾಗೂ ಅವರನ್ನು ಮುಂದಿನ ಆಯ್ಕೆ ಪ್ರಕ್ರಿಯೆಯಿಂದ ಕೈಬಿಡಲಾಗುವುದು.

**8.1.3** ಅಭ್ಯರ್ಥಿಯು ಅರ್ಜಿ ನಮೂನೆಯಲ್ಲಿ ಮೀಸಲಾತಿ ಮತ್ತು ಕೋರುವ ಯಾವುದೇ ಸೌಲಭ್ಯಗಳಿಗೆ ಸಂಬಂಧಿಸಿದಂತೆ ವಿವರಗಳನ್ನು ಅರ್ಜಿಯಲ್ಲಿ ನೀಡಿರುವ ಸಂಬಂಧಿಸಿದ ಕಾಲಂಗಳಲ್ಲಿ ತಪ್ಪದೇ ನಮೂದಿಸಬೇಕು. ಒಂದು ವೇಳೆ ಸದರಿ ವಿವರಗಳನ್ನು ಅರ್ಜಿಯಲ್ಲಿ ನಮೂದಿಸದಿದ್ದರೆ ಅಂತಹ ಅಭ್ಯರ್ಥಿಯು ಮೀಸಲಾತಿ/ಕೋರುವ ಇತರೆ ಸೌಲಭ್ಯಗಳಿಂದ ವಂಚಿತರಾಗುತ್ತಾರೆ.

**8.2 ದೇಹದಾರ್ಢ್ಯತೆ ಪರೀಕ್ಷೆ**

**ಶಾರೀರಿಕ ಮಾನದಂಡಗಳು (Physical Standards):** ಶಾರೀರಿಕ ಮಾನದಂಡಗಳನ್ನು ಈ ಕೆಳಗಿನಂತೆ ನಿಗದಿಪಡಿಸಲಾಗಿದೆ.

| | | |
|---|---|---|
| **ಪುರುಷ ಅಭ್ಯರ್ಥಿಗಳಿಗೆ:** | | |
| 1 | ಎತ್ತರ | ಕನಿಷ್ಠ 163 ಸೆ.ಮೀ. |
| 2 | ಎದೆ ಸುತ್ತಳತೆ | ಸಾಮಾನ್ಯ ಸ್ಥಿತಿಯಲ್ಲಿ ಕನಿಷ್ಠ 79 ಸೆ.ಮೀ.<br>ಕನಿಷ್ಠ ಹಿಗ್ಗುವಿಕೆ 5 ಸೆ.ಮೀ. |
| **ಮಹಿಳಾ ಅಭ್ಯರ್ಥಿಗಳಿಗೆ:** | | |
| 1 | ಎತ್ತರ | ಕನಿಷ್ಠ 150 ಸೆ.ಮೀ. |
| 2 | ಎದೆ ಸುತ್ತಳತೆ | ಸಾಮಾನ್ಯ ಸ್ಥಿತಿಯಲ್ಲಿ ಕನಿಷ್ಠ 74 ಸೆ.ಮೀ.<br>ಕನಿಷ್ಠ ಹಿಗ್ಗುವಿಕೆ 5 ಸೆ.ಮೀ. |

ದೇಹದಾರ್ಢ್ಯತೆ ಪರೀಕ್ಷೆಯಲ್ಲಿ ಅರ್ಹರಾಗುವ ಅಭ್ಯರ್ಥಿಗಳನ್ನು ಮಾತ್ರ ಮುಂದಿನ ಹಂತದ ದೈಹಿಕ ತಾಳ್ವಿಕೆ ಪರೀಕ್ಷೆಗೆ ಪರಿಗಣಿಸಲಾಗುವುದು. ದೇಹದಾರ್ಢ್ಯತೆ ಪರೀಕ್ಷೆಯಲ್ಲಿ ಅನರ್ಹರಾದ ಅಭ್ಯರ್ಥಿಗಳನ್ನು ಮುಂದಿನ ಆಯ್ಕೆ ಪ್ರಕ್ರಿಯೆಯಿಂದ ಕೈಬಿಡಲಾಗುವುದು.

**8.3 ದೈಹಿಕ ತಾಳ್ವಿಕೆ ಪರೀಕ್ಷೆ (Physical Endurance Test)**

| | | |
|---|---|---|
| ಪುರುಷ ಅಭ್ಯರ್ಥಿಗಳಿಗೆ | : | 25 ಕಿ.ಮೀ. ಕಾಲು ನಡಿಗೆ,ಗರಿಷ್ಠ 4 ಗಂಟೆಗಳ ಅವಧಿಯಲ್ಲಿ ಪೂರೈಸಬೇಕು |
| ಮಹಿಳಾ ಅಭ್ಯರ್ಥಿಗಳಿಗೆ | : | 16 ಕಿ.ಮೀ. ಕಾಲು ನಡಿಗೆ,ಗರಿಷ್ಠ 4 ಗಂಟೆಗಳ ಅವಧಿಯಲ್ಲಿ ಪೂರೈಸಬೇಕು. |

ದೈಹಿಕ ತಾಳ್ವಿಕೆ ಪರೀಕ್ಷೆಯಲ್ಲಿ ಅರ್ಹತೆ ಹೊಂದಿದ ಅಭ್ಯರ್ಥಿಗಳು ಮಾತ್ರ ಮುಂದಿನ ಹಂತದ ಲಿಖಿತ Aptitude ಪರೀಕ್ಷೆಗೆ ಹಾಜರಾಗಲು ಅರ್ಹತೆ ಪಡೆಯುತ್ತಾರೆ. ದೈಹಿಕ ತಾಳ್ವಿಕೆ ಪರೀಕ್ಷೆಯಲ್ಲಿ ಅನರ್ಹರಾದ ಅಭ್ಯರ್ಥಿಗಳನ್ನು ಮುಂದಿನ ಆಯ್ಕೆ ಪ್ರಕ್ರಿಯೆಯಿಂದ ಕೈಬಿಡಲಾಗುವುದು.

**ವಿಶೇಷ ಸೂಚನೆ:–** 1:20 (ಖಾಲಿ ಹುದ್ದೆ : ಅಭ್ಯರ್ಥಿ) ಅನುಪಾತದ ಪಟ್ಟಿಯಲ್ಲಿ ಇರುವ ಅಭ್ಯರ್ಥಿಗಳು ಮೂಲ ದಾಖಲೆ/ಪ್ರಮಾಣ ಪತ್ರಗಳ ಪರಿಶೀಲನೆ, ದೇಹದಾರ್ಢ್ಯತೆ, ದೈಹಿಕ ತಾಳ್ವಿಕೆ ಮತ್ತು ಲಿಖಿತ ಪರೀಕ್ಷೆಗಳಿಗೆ ಹಾಜರಾಗಲು ತಿಳಿಸುವ ಪ್ರವೇಶ ಪತ್ರವನ್ನು ಇಲಾಖಾ ವೆಬ್‌ಸೈಟ್:www.aranya.gov.in ನಿಂದ ಡೌನ್‌ಲೋಡ್ ಮಾಡಿಕೊಳ್ಳುವುದು.

**8.4 ಲಿಖಿತ Aptitude ಪರೀಕ್ಷೆ**

ಉಪ ವಲಯ ಅರಣ್ಯಾಧಿಕಾರಿ ಹುದ್ದೆಗೆ ಲಿಖಿತ Aptitude ಪರೀಕ್ಷೆಯ ಪ್ರಶ್ನೆ ಪತ್ರಿಕೆಯು ಸದರಿ ಹುದ್ದೆಗೆ ನಿಗದಿಪಡಿಸಿದ ವಿದ್ಯಾರ್ಹತೆಯ ಮಟ್ಟದಲ್ಲಿದ್ದು **ಬಹು ಆಯ್ಕೆ** (objective multiple choice) ಮಾದರಿಯದ್ದಾಗಿರುತ್ತದೆ. ಲಿಖಿತ Aptitude ಪರೀಕ್ಷೆಯ ಪ್ರಶ್ನೆ ಪತ್ರಿಕೆಯು ನೂರು (100) ಅಂಕಗಳದ್ದಾಗಿದ್ದು, 3 (ಮೂರು) ಗಂಟೆಗಳ ಅವಧಿಯಲ್ಲಿ ಉತ್ತರಿಸಬೇಕಾಗಿದೆ.ಬಿ.ಎಸ್‌ಸಿ. (ಫಾರೆಸ್ಟ್ರಿ) ಮತ್ತು ಬಿ.ಎಸ್‌ಸಿ. ಪದವೀಧರರಿಗೆ **ಪ್ರತ್ಯೇಕವಾಗಿ ಪರೀಕ್ಷೆಗಳನ್ನು ನಡೆಸಲಾಗುವುದು.**

**8.4.1 ಲಿಖಿತ ಪರೀಕ್ಷೆಯ ವಿಷಯಗಳು**

ಲಿಖಿತ ಪರೀಕ್ಷೆಯ ಪಠ್ಯಕ್ರಮವನ್ನು (Syllabus) ನ್ನು ಪ್ರತ್ಯೇಕವಾಗಿ ಇಲಾಖಾ ವೆಬ್‌ಸೈಟ್ www.aranya.gov.in ನಲ್ಲಿ ಪ್ರಕಟಿಸಲಾಗಿದೆ.

**8.4.2 ಲಿಖಿತ Aptitude ಪರೀಕ್ಷಾ ಕೇಂದ್ರ:** ಲಿಖಿತ Aptitude ಪರೀಕ್ಷೆಗಳನ್ನು ಈ ಕೆಳಕಂಡ ಪರೀಕ್ಷಾ ಕೇಂದ್ರಗಳಲ್ಲಿ ನಡೆಸಲಾಗುವುದು. ಇಚ್ಛಿತ ಪರೀಕ್ಷಾ ಕೇಂದ್ರದ ವಿವರವನ್ನು ಅಭ್ಯರ್ಥಿಯು ಅರ್ಜಿಯ ಸೂಕ್ತ ಕಾಲಂನಲ್ಲಿ ನಮೂದಿಸುವುದು.ಈ ರೀತಿ ನಮೂದಿಸಿರುವ ಪರೀಕ್ಷಾ ಕೇಂದ್ರವನ್ನು ಯಾವುದೇ ಹಂತದಲ್ಲಿಯೂ ಯಾವುದೇ ಕಾರಣಕ್ಕೂ ಬದಲಾವಣೆ ಮಾಡಲು ಅವಕಾಶ ನೀಡಲಾಗುವುದಿಲ್ಲ.

**ಮೂಲ ದಾಖಲೆಗಳ ಪರಿಶೀಲನೆ, ದೈಹಿಕ ತಾಳ್ವಿಕೆ ಪರೀಕ್ಷೆ ಮತ್ತು ಲಿಖಿತ ಪರೀಕ್ಷೆ ನಡೆಯುವ ಸ್ಥಳ: (1) ಕಲಬುರಗಿ (2) ಬಳ್ಳಾರಿ.**

**ವಿಶೇಷ ಸೂಚನೆ:–**ಅಭ್ಯರ್ಥಿಗಳು ನೇಮಕಾತಿ ಪರೀಕ್ಷೆಗಳಿಗೆ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗಬೇಕು.

**8.4.3 ಲಿಖಿತ Aptitude ಪರೀಕ್ಷೆ ಬರೆಯುವ ಭಾಷೆ**

ಲಿಖಿತ Aptitude ಪರೀಕ್ಷೆ ಬರೆಯಲು ಅಭ್ಯರ್ಥಿಗಳು ಕನ್ನಡ ಅಥವಾ ಆಂಗ್ಲ ಭಾಷೆಯನ್ನು ಆಯ್ದುಕೊಳ್ಳಬಹುದಾಗಿದೆ.ಅಭ್ಯರ್ಥಿಯು ಆಯ್ದುಕೊಂಡ ಪರೀಕ್ಷೆ ಬರೆಯುವ ಭಾಷೆಯನ್ನು ಅರ್ಜಿಯ ಸಂಬಂಧಿಸಿದ ಕಾಲಂನಲ್ಲಿ ತಪ್ಪದೆ ನಮೂದಿಸಬೇಕು.ಅಭ್ಯರ್ಥಿಯು ಅರ್ಜಿಯಲ್ಲಿ ಒಂದು ಸಾರಿ ನಮೂದಿಸಿರುವ ಲಿಖಿತ Aptitude ಪರೀಕ್ಷೆ ಬರೆಯುವ ಭಾಷೆಯನ್ನು ಯಾವುದೇ ಕಾರಣಕ್ಕೂ ಯಾವುದೇ ಹಂತದಲ್ಲಿಯೂ ಬದಲಾವಣೆ ಮಾಡಲು ಅವಕಾಶವಿರುವುದಿಲ್ಲ.

**8.5** ಎಸ್.ಎಸ್.ಎಲ್.ಸಿ. ಹಾಗೂ ಅದಕ್ಕಿಂತ ಮೇಲ್ಪಟ್ಟ ವಿದ್ಯಾಭ್ಯಾಸದಲ್ಲಿ ಕನ್ನಡ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯನ್ನಾಗಿ ಅಭ್ಯಸಿಸದೇ ಇರುವ ಅಭ್ಯರ್ಥಿಗಳಿಗೆ ಕರ್ನಾಟಕ ಸಿವಿಲ್ ಸೇವೆಗಳು (ನೇಮಕಾತಿ) (ಕನ್ನಡ ಭಾಷಾ ಪರೀಕ್ಷೆ) ನಿಯಮಗಳು, 1984ಕ್ಕೆ ಪೂರಕವಾಗಿ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 69 ಎಸ್‌ಸಿಆರ್ 84 ದಿನಾಂಕ 23–9–1985ರಲ್ಲಿ ಸೂಚಿಸಿದ ಪ್ರಕಾರ ಅಂತಹ ಅಭ್ಯರ್ಥಿಗಳಿಗೆ ಕನ್ನಡ ಭಾಷಾ ಜ್ಞಾನವನ್ನು ಪರೀಕ್ಷಿಸಲು ನಿಗದಿಪಡಿಸಿದ ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾದ ನಂತರವೇ ಅಭ್ಯರ್ಥಿಗಳು ನೇಮಕಾತಿ ಹೊಂದಲು ಅರ್ಹರಾಗುತ್ತಾರೆ.ಕನ್ನಡ ಭಾಷಾ ಪರೀಕ್ಷೆಯಲ್ಲಿ ಅನುತ್ತೀರ್ಣರಾಗುವ ಅಭ್ಯರ್ಥಿಗಳನ್ನು ಮುಂದಿನ ಆಯ್ಕೆ ಪ್ರಕ್ರಿಯೆಯಿಂದ ಕೈಬಿಡಲಾಗುವುದು.

**8.6 Medical Fitness**

ನಿಗದಿಪಡಿಸಿದ ಹುದ್ದೆಗಳಿಗೆ ತಾತ್ಕಾಲಿಕವಾಗಿ ಆಯ್ಕೆಯಾದ ಅಭ್ಯರ್ಥಿಗಳ Medical Fitness ಪರೀಕ್ಷೆಯನ್ನು ಜಿಲ್ಲಾ ಸರ್ಕಾರಿ ಆಸ್ಪತ್ರೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ Civil Surgeon/Chief Medical Officer/Medical Superintendent ರವರ ದರ್ಜೆಗಿಂತ ಕಡಿಮೆ ಇರದ ವೈದ್ಯಾಧಿಕಾರಿಗಳಿಂದ ಈ ಕೆಳಕಂಡ Medical Fitness ಪರೀಕ್ಷೆಗಳನ್ನು ಇಲಾಖಾ ಮುಖಾಂತರ ನಡೆಸಲಾಗುವುದು.ಇದಕ್ಕೆ ಹೊರತಾಗಿ ಯಾವುದೇ ವೈದ್ಯಕೀಯ ಪ್ರಮಾಣ ಪತ್ರದ ಆಧಾರದ ಮೇಲೆ ಅಭ್ಯರ್ಥಿಗಳನ್ನು ಆಯ್ಕೆಗೆ ಪರಿಗಣಿಸಲಾಗುವುದಿಲ್ಲ. ಹೀಗೆ ನಡೆಸುವ Medical Fitness ಪರೀಕ್ಷೆಯಲ್ಲಿ ಅನರ್ಹಗೊಂಡ ಅಭ್ಯರ್ಥಿಗಳನ್ನು ಆಯ್ಕೆ ಪ್ರಕ್ರಿಯೆಯಿಂದ ಕೈಬಿಡಲಾಗುವುದು ಹಾಗೂ ಸೂಚಿತ ದಿನಾಂಕದಂದು ನಡೆಸುವ Medical Fitness ಪರೀಕ್ಷೆಗೆ ಗೈರುಹಾಜರಾಗುವ ಅಭ್ಯರ್ಥಿಗಳಿಗೆ ಯಾವುದೇ ಕಾರಣಕ್ಕೂ, ಯಾವುದೇ ಸಂದರ್ಭದಲ್ಲಿಯೂ ಎರಡನೇ ಬಾರಿ Medical Fitness ಪರೀಕ್ಷೆಯನ್ನು ನಡೆಸಲು ಅವಕಾಶವನ್ನು ನೀಡಲಾಗುವುದಿಲ್ಲ. Medical Fitness ಪರೀಕ್ಷೆಯಲ್ಲಿ ಅರ್ಹರಾಗುವ ಅಭ್ಯರ್ಥಿಗಳನ್ನು ಮಾತ್ರ ಆಯ್ಕೆ ಮಾಡಿ ಸ್ಥಳ ಹಂಚಿಕೆ ನೀಡಲಾಗುವುದು. Medical Fitness ಪರೀಕ್ಷೆಗಳು ಈ ಕೆಳಕಂಡಂತಿರುತ್ತವೆ.

**8.7.1 ಶಾರೀರಿಕ ಮಾನದಂಡಗಳು (Physical Standards)**

ಈ ಕೆಳಗಿನಂತೆ ಶಾರೀರಿಕ ಮಾನದಂಡಗಳ ಕುರಿತು ಪರೀಕ್ಷೆಯನ್ನು ನಡೆಸಲಾಗುವುದು.

| **ಪುರುಷ ಅಭ್ಯರ್ಥಿಗಳಿಗೆ** | | |
|---|---|---|
| 1 | ಎತ್ತರ | ಕನಿಷ್ಠ 163 ಸೆ.ಮೀ. |
| 2 | ಎದೆ ಸುತ್ತಳತೆ | ಸಾಮಾನ್ಯ ಸ್ಥಿತಿಯಲ್ಲಿ ಕನಿಷ್ಠ 79 ಸೆ.ಮೀ.<br>ಕನಿಷ್ಠ ಹಿಗ್ಗುವಿಕೆ 5 ಸೆ.ಮೀ. |
| **ಮಹಿಳಾ ಅಭ್ಯರ್ಥಿಗಳಿಗೆ** | | |
| 1 | ಎತ್ತರ | ಕನಿಷ್ಠ 150 ಸೆ.ಮೀ. |
| 2 | ಎದೆ ಸುತ್ತಳತೆ | ಸಾಮಾನ್ಯ ಸ್ಥಿತಿಯಲ್ಲಿ ಕನಿಷ್ಠ 74 ಸೆ.ಮೀ.<br>ಕನಿಷ್ಠ ಹಿಗ್ಗುವಿಕೆ 5 ಸೆ.ಮೀ. |

**8.7.2 ದೃಷ್ಟಿ ಸಾಮರ್ಥ್ಯ**

ಅಭ್ಯರ್ಥಿಗಳು ಈ ಕೆಳಗೆ ನಿಗದಿಪಡಿಸಿರುವ ದೃಷ್ಟಿ ಸಾಮರ್ಥ್ಯವನ್ನು ಕನ್ನಡಕ ಸಹಿತ ಅಥವಾ ಕನ್ನಡಕ ರಹಿತ ಕಡ್ಡಾಯವಾಗಿ ಹೊಂದಿರಬೇಕು ಹಾಗೂ ದೃಷ್ಟಿ ಸಾಮರ್ಥ್ಯ ಕುರಿತು ಈ ಕೆಳಕಂಡ ವೈದ್ಯಕೀಯ ಪರೀಕ್ಷೆಗಳನ್ನು ನಡೆಸಲಾಗುವುದು.

| **ದೂರ ದೃಷ್ಟಿ** (Distant vision) | | | **ಸಮೀಪ ದೃಷ್ಟಿ** (Near vision) | | |
|---|---|---|---|---|---|
| ದೋಷರಹಿತ ಕಣ್ಣು (Better eye) | ಅಥವಾ | ದೋಷಪೂರಿತ ಕಣ್ಣು (Worse eye) | ದೋಷರಹಿತ ಕಣ್ಣು (Better eye) | ಅಥವಾ | ದೋಷಪೂರಿತ ಕಣ್ಣು (Worse eye) |
| 6/6 ಮೀಟರ್ | | 6/9 ಮೀಟರ್ | 0/6 ಮೀಟರ್ | | 0/8 ಮೀಟರ್ |

ಪ್ರತಿ ಕಣ್ಣು ಸಂಪೂರ್ಣ ದೃಷ್ಟಿ ಹೊಂದಿರಬೇಕು. ವರ್ಣಾಂಧತೆ, ಮೆಳ್ಳೆಗಣ್ಣು ಅಥವಾ ಯಾವುದೇ ಕಣ್ಣಿನ ಅಥವಾ ರೆಪ್ಪೆಯ ವಿಕೃತ ಸ್ಥಿತಿಯನ್ನು ಅನರ್ಹತೆ ಎಂದು ಪರಿಗಣಿಸಲಾಗುವುದು.

**8.7.3 ಶ್ರವಣಶಕ್ತಿ**

ಅಭ್ಯರ್ಥಿಗಳ ಶ್ರವಣ ಶಕ್ತಿಯನ್ನು ಪರೀಕ್ಷಿಸಲು ಈ ಕೆಳಕಂಡ ವೈದ್ಯಕೀಯ ಪರೀಕ್ಷೆಗಳನ್ನು ನಡೆಸಲಾಗುವುದು.

1. ರಿನ್ನರ್ಸ್ ಟೆಸ್ಟ್
2. ವೆಬ್ಬರ್ಸ್ ಟೆಸ್ಟ್
3. ಟೆಸ್ಟ್ ಫಾರ್ ವರ್ಟಿಗೋ

ಮೇಲಿನ ಪರೀಕ್ಷೆಗಳಲ್ಲಿ ಯಾವುದಾದರೂ ಶ್ರವಣ ದೋಷವಿದೆಯೆಂದು ಕಂಡುಬಂದಲ್ಲಿ ಅಂತಹ ಅಭ್ಯರ್ಥಿಗಳು ಆಯ್ಕೆಗೆ ಅನರ್ಹರಾಗುತ್ತಾರೆ.

**8.7.4 ಕೆಳಕಂಡ ಅಂಗವಿಕಲತೆ (Physical dis-qualifications) ಇರುವವರು ಆಯ್ಕೆಗೆ ಅನರ್ಹರು.**

1. ತಾಗು ಮಂಡಿಗಳು (knock knees)
2. ಬಾಗಿದ ಕಾಲುಗಳು (Bow legs)
3. ಚಪ್ಪಟೆ ಪಾದ (Flat feet)
4. ನರ ಊತವಿರುವವರು (Varicose Veins)

**9. ನೇಮಕಾತಿ ಹೊಂದಿದ ಅಭ್ಯರ್ಥಿಗಳ ತರಬೇತಿ, ಪರೀಕ್ಷಾರ್ಥ ಅವಧಿ ಹಾಗೂ ಸ್ಥಳ ನಿಯುಕ್ತಿ:**

ಅಂತಿಮವಾಗಿ ನೇಮಕಾತಿಗೆ ಅರ್ಹರಾದ ಅಭ್ಯರ್ಥಿಗಳನ್ನು ಹೈದರಾಬಾದ್-ಕರ್ನಾಟಕ ಪ್ರದೇಶದ ಅರಣ್ಯ ವೃತ್ತದಲ್ಲಿ/ವಿಭಾಗದಲ್ಲಿ/ಭಾಗದಲ್ಲಿ ನಿಯುಕ್ತಿಗೊಳಿಸಲಾಗುವುದು. ನೇಮಕಾತಿ ಹೊಂದಿದ ಅಭ್ಯರ್ಥಿಯು ಪ್ರಪ್ರಥಮವಾಗಿ ನೇಮಕ ಮಾಡಿದ ಸ್ಥಳದಲ್ಲಿ ಕನಿಷ್ಠ 5 ವರ್ಷಗಳ ಸೇವೆಯನ್ನು ಪೂರೈಸತಕ್ಕದ್ದು.

ನೇಮಕಾತಿ ಹೊಂದಿದ ಅಭ್ಯರ್ಥಿಗಳು ಉಪ ವಲಯ ಅರಣ್ಯಾಧಿಕಾರಿ ಹುದ್ದೆಗೆ ನಿಗದಿಪಡಿಸಿದ ತರಬೇತಿಯನ್ನು ಯಶಸ್ವಿಯಾಗಿ ಪೂರೈಸಬೇಕಾಗಿದೆ ಹಾಗೂ ಪರೀಕ್ಷಾರ್ಥ ಅವಧಿಯೊಳಗೆ ಈ ಹುದ್ದೆಗೆ ನಿಗದಿಪಡಿಸಿದ ಎಲ್ಲಾ ಇಲಾಖಾ ಪರೀಕ್ಷೆಗಳನ್ನು ತೇರ್ಗಡೆ ಹೊಂದಬೇಕಾಗಿರುತ್ತದೆ. ನಿಗದಿಪಡಿಸಿದ ತರಬೇತಿ ಅವಧಿ ಹಾಗೂ ಪರೀಕ್ಷಾರ್ಥ ಅವಧಿಯ ವಿವರ ಕೆಳಕಂಡಂತಿದೆ.

| **ಹುದ್ದೆ** | **ತರಬೇತಿ ಅವಧಿ** | **ಪರೀಕ್ಷಾರ್ಥ ಅವಧಿ (ತರಬೇತಿ ಅವಧಿ ಸೇರಿ)** |
|---|---|---|
| ಉಪ ವಲಯ ಅರಣ್ಯಾಧಿಕಾರಿ | 12 ತಿಂಗಳು | 24 ತಿಂಗಳು |

**10.** ಆಯ್ಕೆಯಾದ ಅಭ್ಯರ್ಥಿಗಳನ್ನು ಅರಣ್ಯ ಇಲಾಖೆಯಲ್ಲಿ ರೂ.12500–250–13000–300–14200–350–15600–400–17200–450–19000–500–21000–600–24000ರ ವೇತನ ಶ್ರೇಣಿಯಲ್ಲಿ ಎರಡು ವರ್ಷಗಳ ಪರೀಕ್ಷಾರ್ಥ ಅವಧಿಯ ಮೇಲೆ ಉಪ ವಲಯ ಅರಣ್ಯಾಧಿಕಾರಿಗಳನ್ನಾಗಿ ಸಂಬಂಧಿಸಿದ ನೇಮಕಾತಿ ಪ್ರಾಧಿಕಾರವಾದ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ/ಅರಣ್ಯ ಸಂರಕ್ಷಣಾಧಿಕಾರಿ ಇವರಿಂದ ನೇಮಕಾತಿ ಆದೇಶ ನೀಡಲಾಗುವುದು ಮತ್ತು ಅವರನ್ನು 12 ತಿಂಗಳ ಉಪ ವಲಯ ಅರಣ್ಯಾಧಿಕಾರಿ ಹುದ್ದೆಯ ತರಬೇತಿಗಾಗಿ ಸಂಬಂಧಪಟ್ಟ ತರಬೇತಿ ಸಂಸ್ಥೆಗೆ ನಿಯೋಜಿಸಲಾಗುವುದು.

**11.** ಉಪ ವಲಯ ಅರಣ್ಯಾಧಿಕಾರಿಯಾಗಿ ನೇಮಕಗೊಂಡ ನಂತರ ಸದರಿ ಅಭ್ಯರ್ಥಿಯು ತರಬೇತಿಗೆ ಹಾಜರಾಗುವ ಮೊದಲು ನೇಮಕಾತಿ ಪ್ರಾಧಿಕಾರದ ಸಮಕ್ಷಮ ಅಭ್ಯರ್ಥಿಯು ಇಲಾಖೆಯಲ್ಲಿ ನೇಮಕಾತಿಯಾದ ದಿನಾಂಕದಿಂದ ಕನಿಷ್ಠ 5 ವರ್ಷ ಸೇವೆ ಸಲ್ಲಿಸುವುದಾಗಿ, ತಪ್ಪಿದಲ್ಲಿ ಸರ್ಕಾರವು ತರಬೇತಿಯ ಬಗ್ಗೆ ಭರಿಸಿದ ಸಂಪೂರ್ಣ ವೆಚ್ಚವನ್ನು ಮತ್ತು ತರಬೇತಿ ಅವಧಿಯಲ್ಲಿ ಪಡೆದ ವೇತನವನ್ನು ಶೇ.8 ರ ದಂಡನೆ ಬಡ್ಡಿಯೊಂದಿಗೆ ಸರ್ಕಾರಕ್ಕೆ ಪಾವತಿ ಮಾಡಲು ಮತ್ತು ಆಯ್ಕೆ ಪ್ರಾಧಿಕಾರ ನಿಗದಿಪಡಿಸುವ ಇತರೆ ಷರತ್ತುಗಳನ್ನು ಪೂರೈಸಲು ಸಿದ್ಧವಿರುವುದಾಗಿ ಛಾಪಾ ಕಾಗದದಲ್ಲಿ ನಿಗದಿತ ನಮೂನೆಯಲ್ಲಿ ಅಭ್ಯರ್ಥಿಯು ಮತ್ತು ರೂ.50,000–00 ಸಾಲ್ವೆಂಟ್ ಶೂರಿಟಿ ಹೊಂದಿರುವ ಒಬ್ಬರು ಅಥವಾ ರೂ. 14,550/– ಗಿಂತ ಹೆಚ್ಚು ಮಾಸಿಕ ವೇತನ ಪಡೆಯುತ್ತಿರುವ ಮತ್ತು ತರಬೇತಿ ಮುಗಿಯುವ ದಿನಾಂಕದಿಂದ ಕನಿಷ್ಠ 6 ವರ್ಷ ಸೇವಾವಧಿ ಉಳಿದಿರುವ ಒಬ್ಬರು ಸರ್ಕಾರಿ ನೌಕರರ ಜಾಮೀನಿನೊಂದಿಗೆ ಕರಾರು ಪತ್ರವನ್ನು ಬರೆದು ಕೊಡತಕ್ಕದ್ದು.ಇದು ಸಾಧ್ಯವಾಗದಿದ್ದ ಪಕ್ಷದಲ್ಲಿ ಅಭ್ಯರ್ಥಿಯು ರೂ.50,000–00 ಮೊತ್ತದ ರಾಷ್ಟ್ರೀಯ ಉಳಿತಾಯ ಸರ್ಟಿಫಿಕೇಟನ್ನು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಮುಖ್ಯಸ್ಥರು, ಅರಣ್ಯ ಪಡೆ), ಬೆಂಗಳೂರು ಇವರ ಹೆಸರಿಗೆ ಅಡವು ಇರಿಸಬಹುದು.

**12.** ಒಂದು ವೇಳೆ ಅಭ್ಯರ್ಥಿಯು ಸೂಕ್ತ ಕಾರಣಗಳನ್ನು ಹೊರತುಪಡಿಸಿ (ಕಾರಣದ ಸೂಕ್ತತೆ ಬಗ್ಗೆ ಸರ್ಕಾರದ ನಿರ್ಣಯವೇ ಅಂತಿಮವಾಗುತ್ತದೆ) ಷರತ್ತುಗಳನ್ನು ಪೂರೈಸಲು ವಿಫಲವಾದಲ್ಲಿ ಅಥವಾ ತರಬೇತಿಯನ್ನು ಪೂರೈಸಿ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಲು ವಿಫಲರಾದಲ್ಲಿ ಅಥವಾ ಯಾವುದೇ

ಕಾರಣಕ್ಕಾಗಿ ತರಬೇತಿಯಿಂದ ತೆಗೆದು ಹಾಕಲ್ಪಟ್ಟರೆ ಅಥವಾ ಸ್ವಇಚ್ಛೆಯಿಂದ ತರಬೇತಿ ಮಧ್ಯದಲ್ಲಿ ಬಿಟ್ಟುಬಿಟ್ಟರೆ ಅಥವಾ ಪರೀಕ್ಷಾರ್ಥ ಅವಧಿಯನ್ನು ಯಶಸ್ವಿಯಾಗಿ ಪೂರೈಸದಿದ್ದರೆ ಸರ್ಕಾರವು ಅಭ್ಯರ್ಥಿಯ ತರಬೇತಿಗಾಗಿ ಭರಿಸಿದ ವೆಚ್ಚವನ್ನು ಮತ್ತು ತರಬೇತಿ ಅವಧಿಯಲ್ಲಿ ಪಡೆದ ವೇತನವನ್ನು ಮೇಲೆ ನಿಗದಿಪಡಿಸಿದ ದರದಲ್ಲಿ ಬಡ್ಡಿಯೊಂದಿಗೆ ಮರು ಪಾವತಿಸಲು ಅಭ್ಯರ್ಥಿ ಮತ್ತು ಜಾಮೀನುದಾರರು ಒಟ್ಟಾಗಿಯೂ ಮತ್ತು ಪ್ರತ್ಯೇಕವಾಗಿಯೂ ಭರಿಸಲು ಬದ್ಧರಾಗಿರತಕ್ಕದ್ದು. ಅಂತಹ ಹಣವನ್ನು ಕಂದಾಯ ಬಾಕಿಯಾಗಿ ಇವರೆಲ್ಲರಿಂದ ಒಟ್ಟಾರೆಯಾಗಿ ಅಥವಾ ಪ್ರತಿಯೊಬ್ಬರಿಂದ ಪ್ರತ್ಯೇಕವಾಗಿ ವಸೂಲು ಮಾಡುವ ಹಕ್ಕನ್ನು ಸರ್ಕಾರ ಹೊಂದಿರುತ್ತದೆ.

**13. ವಿವಿಧ ಪ್ರವರ್ಗಗಳ ಅಡಿ ಮೀಸಲಾತಿ ಕೋರುವ ಅಭ್ಯರ್ಥಿಗಳು ಸಲ್ಲಿಸಬೇಕಾದ ದಾಖಲೆ/ಪ್ರಮಾಣ ಪತ್ರಗಳ ವಿವರ ಕೆಳಕಂಡಂತಿದೆ.**

ವಿವಿಧ ಪ್ರವರ್ಗಗಳ ಅಡಿ ಮೀಸಲಾತಿ ಕೋರಿ ಅರ್ಜಿ ಸಲ್ಲಿಸುವವರು ಜಾತಿ ಪ್ರಮಾಣ ಪತ್ರ ಹಾಗೂ ಆದಾಯ ಪ್ರಮಾಣ ಪತ್ರ, ಇತ್ಯಾದಿ ಮೀಸಲಾತಿ ಕುರಿತು ಪ್ರಮಾಣ ಪತ್ರಗಳನ್ನು ಈ ಕೆಳಕಂಡ ನಮೂನೆಗಳಲ್ಲಿ ಹೊಂದಿರಬೇಕು.

**13.1** ಪರಿಶಿಷ್ಠ ಜಾತಿ/ಪರಿಶಿಷ್ಠ ಪಂಗಡದ ಅಭ್ಯರ್ಥಿಗಳು ಸಂಬಂಧಪಟ್ಟ ತಹಶೀಲ್ದಾರ್‌ರವರಿಂದ ನೀಡಲಾದ ಜಾತಿ ಪ್ರಮಾಣ ಪತ್ರವನ್ನು "ನಮೂನೆ–ಡಿ"ರಲ್ಲಿ ಪಡೆದಿರಬೇಕು.

**13.2** ಪ್ರವರ್ಗ–I ಕ್ಕೆ ಸೇರಿದ ಅಭ್ಯರ್ಥಿಗಳು ಸಂಬಂಧಪಟ್ಟ ತಹಶೀಲ್ದಾರ್‌ರವರಿಂದ ನೀಡಲಾದ ಜಾತಿ ಪ್ರಮಾಣ ಪತ್ರವನ್ನು "ನಮೂನೆ–ಇ"ರಲ್ಲಿ ಪಡೆದಿರಬೇಕು.

**13.3** ಪ್ರವರ್ಗ–IIಎ,IIಬಿ, IIIಎ ಮತ್ತು IIIಬಿ. ಗೆ ಸೇರಿದ ಅಭ್ಯರ್ಥಿಗಳು ಸಂಬಂಧಪಟ್ಟ ತಹಶೀಲ್ದಾರ್‌ರವರಿಂದ ನೀಡಲಾದ ಆದಾಯ ಮತ್ತು ಜಾತಿ ಪ್ರಮಾಣ ಪತ್ರವನ್ನು "ನಮೂನೆ–ಎಫ್"ರಲ್ಲಿಪಡೆದಿರಬೇಕು.

**ವಿಶೇಷ ಸೂಚನೆ:–**"ನಮೂನೆ–ಎಫ್" ಪ್ರಮಾಣ ಪತ್ರವು ಅಧಿಸೂಚನೆಯ ದಿನಾಂಕಕ್ಕೆ ಐದು (5) ವರ್ಷಗಳಿಗಿಂತ ಹೆಚ್ಚು ಹಳೆಯ ಸಮಯದ್ದಾಗಿರಬಾರದು. ಅವಧಿ ಮೀರಿದ ಪ್ರಮಾಣ ಪತ್ರವನ್ನು ಪರಿಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ.

**13.4** ಯೋಜನೆಗಳಿಂದ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿಯು ಸಂಬಂಧಪಟ್ಟ ತಹಶೀಲ್ದಾರ್‌ರಿಂದ "ನಮೂನೆ–3" ರಲ್ಲಿ ನೀಡಿರುವ ಪ್ರಮಾಣ ಪತ್ರವನ್ನು ಪಡೆದಿರಬೇಕು.

**13.5** ಮಾಜಿ ಸೈನಿಕ ಅಭ್ಯರ್ಥಿಗಳು ಸಂಬಂಧಪಟ್ಟ ಘಟಕದಿಂದ ಡಿಸ್‌ಚಾರ್ಜ್ ಹೊಂದಿದ ಬಗ್ಗೆ ಮೂಲ ಪ್ರಮಾಣ ಪತ್ರ ಮತ್ತು ಪೆನ್‌ಷನ್ ಪಡೆಯುತ್ತಿರುವ ಬಗ್ಗೆ ದಾಖಲೆ ಪತ್ರ ಪಡೆದಿರಬೇಕು ಹಾಗೂ ಮಾಜಿ ಸೈನಿಕ ಮೀಸಲಾತಿಗೆ ನಿಯಮಾನುಸಾರ ಅರ್ಹರೇ ಎಂಬ ಬಗ್ಗೆ ಪ್ರಮಾಣ ಪತ್ರವನ್ನು ಹತ್ತಿರದ ಸೈನಿಕ ಕಲ್ಯಾಣ ಹಾಗೂ ಪುನರ್ವಸತಿ ಇಲಾಖೆಯಿಂದ ಪಡೆದಿರಬೇಕು.

**13.6** (ಅ) ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಠ ಜಾತಿ, ಪರಿಶಿಷ್ಠ ಪಂಗಡ, ಪ್ರವರ್ಗ–I, IIಎ, IIಬಿ, IIIಎ ಮತ್ತು IIIಬಿ, ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳು 1ನೇ ತರಗತಿಯಿಂದ 10ನೇ ತರಗತಿಯವರಿಗೆ (ಎಲ್ಲಾ ವರ್ಷಗಳು)ಗ್ರಾಮೀಣ ಪ್ರದೇಶದ ಶಾಲೆಗಳಲ್ಲಿ ವಿದ್ಯಾಭ್ಯಾಸ ಮಾಡಿದ ಬಗ್ಗೆ ಸಂಬಂಧಪಟ್ಟ ಶಾಲಾ ಮುಖ್ಯೋಪಾಧ್ಯಾಯರಿಂದ ನೀಡಲಾದ "ನಮೂನೆ–2"ನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳು ಮೇಲುರುಜು ಮಾಡಿದ ಪ್ರಮಾಣ ಪತ್ರವನ್ನುಪಡೆದಿರಬೇಕು.

(ಆ) ಗ್ರಾಮೀಣ ಮೀಸಲಾತಿ ಕೋರಿರುವ ಸಾಮಾನ್ಯ ಅರ್ಹತೆಯ (General Merit) ಅಭ್ಯರ್ಥಿಗಳು ಮೇಲೆ 13.6(ಅ) ರಲ್ಲಿ ತಿಳಿಸಿರುವ "ನಮೂನೆ–2" ರ ಜೊತೆಗೆ ನಿಗದಿತ "ನಮೂನೆ–1" ರಲ್ಲಿ ಸಂಬಂಧಪಟ್ಟ ತಹಶೀಲ್ದಾರರಿಂದ ಅವರು ಮೇಲುಸ್ಥರ (Creamy Layer) ಪರಿಮಿತಿಯಲ್ಲಿ ಬರುವುದಿಲ್ಲವೆಂದು ದೃಢೀಕರಿಸಿರುವ ಪ್ರಮಾಣ ಪತ್ರ ಪಡೆದಿರಬೇಕು.

**ವಿಶೇಷ ಸೂಚನೆ:–**ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಠ ಜಾತಿ, ಪರಿಶಿಷ್ಠ ಪಂಗಡ, ಪ್ರವರ್ಗ–I, IIಎ, IIಬಿ, IIIಎ ಮತ್ತು IIIಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಆದಾಯ ಮತ್ತು ಜಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅವರು ಗ್ರಾಮೀಣ ಮೀಸಲಾತಿಗೂ ಅನರ್ಹರಾಗುತ್ತಾರೆ.

**13.7** ಕನ್ನಡ ಮಾಧ್ಯಮ ವರ್ಗೀಕರಣದಲ್ಲಿ ಮೀಸಲಾತಿ ಕೋರಿರುವ ಅಭ್ಯರ್ಥಿಗಳು ಒಂದನೇ ತರಗತಿಯಿಂದ ಹತ್ತನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಬಗ್ಗೆ ಶಾಲಾ ಮುಖ್ಯೋಪಾಧ್ಯಾಯರಿಂದ ಸಹಿ ಮಾಡಿಸಿ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲುರುಜು ಮಾಡಿದ ಪ್ರಮಾಣ ಪತ್ರ ಪಡೆದಿರಬೇಕು.

**13.8** ಅರಣ್ಯ ಪ್ರೇರಕರಾಗಿ ಅಧಿಸೂಚನೆ ದಿನಾಂಕಕ್ಕೆ ಐದು (5) ವರ್ಷಗಳ ಸೇವೆಯನ್ನು ಸಲ್ಲಿಸಿದ್ದು, ಪ್ರಸ್ತುತ ಅರಣ್ಯ ಪ್ರೇರಕರಾಗಿ ಮುಂದುವರೆಯುತ್ತಿರುವ ಅರಣ್ಯ ಪ್ರೇರಕರ ಬಗ್ಗೆ ಸಂಬಂಧಿಸಿದ ಸಾಮಾಜಿಕ ಅರಣ್ಯ ವಿಭಾಗಗಳ ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು.

**13.9** ಕುಷ್ಠರೋಗದಿಂದ ಗುಣಮುಖ ಹೊಂದಿರುವ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳಿಗೆ ಮೀಸಲಾತಿ ಕೋರುವ ಅಭ್ಯರ್ಥಿಗಳು **ಕುಷ್ಠರೋಗದಿಂದ ಗುಣಮುಖರಾಗಿರುವ ಬಗ್ಗೆ** ವೈದ್ಯಕೀಯ ಪ್ರಮಾಣ ಪತ್ರವನ್ನು ದಿನಾಂಕ 19.11.2005ರ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 115 ಸೆನೆನಿ 2005ರಲ್ಲಿ ನಿಗದಿಪಡಿಸಿದ ನಮೂನೆಯಲ್ಲಿ ಕುಷ್ಠರೋಗದಿಂದ ಗುಣಮುಖರಾಗಿರುವ ಬಗ್ಗೆ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು.

**13.10** ಹೈದರಾಬಾದ್–ಕರ್ನಾಟಕ ಮೀಸಲಾತಿ ಕುರಿತು ನಿಗದಿತ ಪ್ರಮಾಣ ಪತ್ರವನ್ನು ಅಭ್ಯರ್ಥಿಗಳು ಪಡೆದಿಟ್ಟುಕೊಂಡಿರಬೇಕು.

**14.0 ಗಮನಿಸಬೇಕಾದ ಮುಖ್ಯ ಅಂಶಗಳು**

**14.1** ನಿಗದಿತ ನಮೂನೆಯಲ್ಲಿ ಅರ್ಜಿ ಸಲ್ಲಿಸಿದ ಮಾತ್ರಕ್ಕೆ ಅಭ್ಯರ್ಥಿಯು ಆಯ್ಕೆಗೆ ಅರ್ಹತೆ ಪಡೆಯುವುದಿಲ್ಲ.

14.2 ಅಭ್ಯರ್ಥಿಗಳು ಅರ್ಜಿ ಹಾಕುವ ಮೊದಲು ದೇಹದಾರ್ಢ್ಯತೆಯ ಕುರಿತು ಸದರಿ ಹುದ್ದೆಗೆ ನಿಗದಿಪಡಿಸಿರುವ ಮಾನದಂಡವು ತಮಗೆ ಇರುವ ಕುರಿತು ಖಚಿತಪಡಿಸಿಕೊಂಡು ಅರ್ಜಿಯನ್ನು ಸಲ್ಲಿಸಲು ತಿಳಿಸಿದೆ.

14.3 ಯಾವುದೇ ವಿಧದ ಅಂಗವಿಕಲತೆಯನ್ನು ಹೊಂದಿರುವ ಅಭ್ಯರ್ಥಿಗಳಿಗೆ ಉಪ ವಲಯ ಅರಣ್ಯಾಧಿಕಾರಿ ಹುದ್ದೆಗೆ ಅರ್ಜಿ ಸಲ್ಲಿಸಲು ಅವಕಾಶವಿರುವುದಿಲ್ಲ. ಕುಷ್ಠರೋಗದಿಂದ ಗುಣಮುಖ ಹೊಂದಿದ ಅಭ್ಯರ್ಥಿಗಳು ಯಾವುದೇ ವಿಧದ ಅಂಗವಿಕಲತೆಯನ್ನು ಹೊಂದಿರಬಾರದು.

14.4 ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ On-line ಅರ್ಜಿಯ ಒಂದು ಜೆರಾಕ್ಸ್ ಪ್ರತಿ ಮತ್ತು ಶುಲ್ಕ ಪಾವತಿಸಿದ ರಶೀತಿಯನ್ನು ತಮ್ಮೊಂದಿಗೆ ತಪ್ಪದೇ ಇಟ್ಟುಕೊಳ್ಳಲು ಸೂಚಿಸಿದೆ.

14.5 ಅಭ್ಯರ್ಥಿಗಳು On-line ಅರ್ಜಿಯಲ್ಲಿ ನಮೂದಿಸಿರುವ ಮಾಹಿತಿ/ವಿವರಗಳ ಆಧಾರದ ಮೇಲೆ ಅವರ ಅರ್ಹತೆಯನ್ನು ಪರಿಗಣಿಸಿ 1:20 (ಖಾಲಿ ಹುದ್ದೆ : ಅಭ್ಯರ್ಥಿ) ಅನುಪಾತದ ಪಟ್ಟಿಯನ್ನು ಸಿದ್ಧಪಡಿಸುವುದರಿಂದ ಅಭ್ಯರ್ಥಿಯು ಅರ್ಜಿಯನ್ನು ಭರ್ತಿ ಮಾಡುವಾಗ ಅಸ್ಪಷ್ಟ/ಅಪೂರ್ಣ/ತಪ್ಪು ಅಥವಾ ಸುಳ್ಳು ಮಾಹಿತಿ ನೀಡಬಾರದು. ಅಸ್ಪಷ್ಟ/ಅಪೂರ್ಣ/ತಪ್ಪು ಅಥವಾ ಸುಳ್ಳು ಮಾಹಿತಿ ನೀಡಿದ್ದಲ್ಲಿ ಅಭ್ಯರ್ಥಿಗಳೇ ಅದಕ್ಕೆ ನೇರ ಮತ್ತು ಸಂಪೂರ್ಣ ಜವಾಬ್ದಾರರಾಗುತ್ತಾರೆ. ಅಭ್ಯರ್ಥಿಗಳು On-line ಅರ್ಜಿಯಲ್ಲಿ ನೀಡಿರುವ ಮಾಹಿತಿ/ವಿವರಗಳನ್ನು ಯಾವುದೇ ಹಂತದಲ್ಲಿಯೂ ಬದಲಾವಣೆ ಮಾಡಲು ಅವಕಾಶ ನೀಡಲಾಗುವುದಿಲ್ಲ. ಆದ ಪ್ರಯುಕ್ತ ಅಭ್ಯರ್ಥಿಗಳು On-line ಅರ್ಜಿಯನ್ನು ಭರ್ತಿ ಮಾಡುವಾಗ ಈ ಕಚೇರಿಯ ಅಧಿಸೂಚನೆಯಲ್ಲಿ ತಿಳಿಸಿರುವ ಎಲ್ಲಾ ಅಂಶಗಳನ್ನು ಸರಿಯಾಗಿ ಅರ್ಥೈಸಿಕೊಂಡು, ಅರ್ಜಿಯನ್ನು ಸರಿಯಾಗಿ ಮತ್ತು ಸಮರ್ಪಕವಾಗಿ ಭರ್ತಿ ಮಾಡತಕ್ಕದ್ದು.

14.6 ಪ್ರವರ್ಗದ ಮೀಸಲಾತಿಯಲ್ಲಿ ಆಯ್ಕೆ ಬಯಸುವ ಅಭ್ಯರ್ಥಿಗಳು ಅರ್ಜಿಯಲ್ಲಿ ಪ್ರವರ್ಗದ ಕಾಲಂ ಅನ್ನು ಕಡ್ಡಾಯವಾಗಿ ನಮೂದಿಸಬೇಕು.ಈ ಕಾಲಂ ಅನ್ನು ಭರ್ತಿ ಮಾಡದೆ ಖಾಲಿ ಬಿಟ್ಟಲ್ಲಿ "ಸಾಮಾನ್ಯ ಅರ್ಹತೆ" ಎಂದು ಪರಿಗಣಿಸಲಾಗುವುದು.ಯಾವುದೇ ಹಂತದಲ್ಲಿ ಅಭ್ಯರ್ಥಿಯು ತಾನು ಹೊಂದಿರುವ ಪ್ರವರ್ಗದ ಕುರಿತು ಮಾಹಿತಿಯನ್ನು ಹೊಸದಾಗಿ ಸೇರ್ಪಡೆ ಮಾಡಲು ಅಥವಾ ಬದಲಾವಣೆ ಮಾಡಲು ಅವಕಾಶವಿಲ್ಲ.

14.7 ಅಭ್ಯರ್ಥಿಗಳು ತಮ್ಮ ಅರ್ಜಿಗಳಲ್ಲಿ ನೀಡಿರುವ ಮಾಹಿತಿಗಳು ಸರಿ ಇದೆ ಎಂದು ಭಾವಿಸಿ ಅವರುಗಳು ದೇಹದಾರ್ಢ್ಯತೆ, ದೈಹಿಕ ತಾಳ್ವಿಕೆ ಮತ್ತು ಲಿಖಿತ Aptitude ಪರೀಕ್ಷೆಯನ್ನು ಬರೆಯಲು ಅರ್ಹರೇ ಎಂಬುದನ್ನು ಪರಿಗಣಿಸಿ ಅರ್ಹರೆಂದು ಕಂಡು ಬಂದ ಅಭ್ಯರ್ಥಿಗಳಿಗೆ ಮಾತ್ರ ಪ್ರವೇಶ ಪತ್ರಗಳನ್ನು ಜಾರಿ ಮಾಡಲಾಗುತ್ತದೆ.ಆದ್ದರಿಂದ ನಿಗದಿಪಡಿಸಿದ ವಯೋಮಿತಿ, ವಿದ್ಯಾರ್ಹತೆ, ಮೀಸಲಾತಿ, ಇತ್ಯಾದಿಗಳಿಗೆ ಅನುಗುಣವಾಗಿ ಅರ್ಜಿಯಲ್ಲಿ ಸರಿಯಾದ ಮಾಹಿತಿ ನೀಡುವುದು ಅಭ್ಯರ್ಥಿಗಳ ಜವಾಬ್ದಾರಿಯಾಗಿರುತ್ತದೆ.

14.8 ಅರ್ಜಿ ಶುಲ್ಕವನ್ನು ಯಾವುದೇ ಕಾರಣಕ್ಕೂ ಮರುಪಾವತಿ ಮಾಡಲಾಗುವುದಿಲ್ಲ.

14.9 ಒಬ್ಬನೇ ಅಭ್ಯರ್ಥಿಯು ಒಂದೇ ಹುದ್ದೆಗೆ ಒಂದಕ್ಕಿಂತ ಹೆಚ್ಚು ಅರ್ಜಿಗಳನ್ನು ಸಲ್ಲಿಸಿದ್ದಲ್ಲಿ, ತಾನು ಸಲ್ಲಿಸಿರುವ ಎಲ್ಲಾ ಅರ್ಜಿಗಳಲ್ಲಿಯೂ ಒಂದೇ ರೀತಿ ಮಾಹಿತಿಯನ್ನು ನೀಡಿದಲ್ಲಿ ಅಭ್ಯರ್ಥಿ ಸಲ್ಲಿಸಿರುವ ಕೊನೆಯ ಅರ್ಜಿಯನ್ನು ಮಾತ್ರ ಪರಿಗಣಿಸಲಾಗುವುದು. ಈ ವಿಷಯದಲ್ಲಿ ಆಯ್ಕೆ ಪ್ರಾಧಿಕಾರದ ತೀರ್ಮಾನವೇ ಅಂತಿಮವಾಗಿರುತ್ತದೆ.

14.10 ಪ್ರಸ್ತುತ ಸರ್ಕಾರಿ (ಕೇಂದ್ರ ಸರ್ಕಾರ/ಕರ್ನಾಟಕ ರಾಜ್ಯ ಸರ್ಕಾರ/ಇತರೆ ರಾಜ್ಯಗಳು) ಹಾಗೂ ಸಂಸ್ಥೆಗಳಲ್ಲಿ ಅಥವಾ ಪ್ರಾಧಿಕಾರದಲ್ಲಿ ಸೇವೆ ಸಲ್ಲಿಸುತ್ತಿರುವ ಅಭ್ಯರ್ಥಿಗಳು ಸಂಬಂಧಿಸಿದ ನೇಮಕಾತಿ ಪ್ರಾಧಿಕಾರದಿಂದ ಕಡ್ಡಾಯವಾಗಿ ಅನುಮತಿ ಪತ್ರವನ್ನು ಪಡೆದಿಟ್ಟುಕೊಂಡು ಅರಣ್ಯ ಇಲಾಖೆಯು ಆಪೇಕ್ಷಿಸಿದಾಗ ನೀಡತಕ್ಕದ್ದು.

14.11 ಯಾವುದೇ ಅಭ್ಯರ್ಥಿಯು ತನ್ನ ಆಯ್ಕೆಗೆ ಸಂಬಂಧಿಸಿದಂತೆ ಬಾಹ್ಯ ಒತ್ತಡ ತರಲು ಪ್ರಯತ್ನಿಸಿದಲ್ಲಿ ಅಂತಹ ಅಭ್ಯರ್ಥಿಯನ್ನು ಆಯ್ಕೆ ಪ್ರಕ್ರಿಯೆಯಿಂದ ಅನರ್ಹಗೊಳಿಸಲಾಗುವುದು.

14.12 ಕರ್ನಾಟಕ ರಾಜ್ಯದ ಯಾವುದೇ ಸರ್ಕಾರಿ ಇಲಾಖೆ, ಕೇಂದ್ರ ಸರ್ಕಾರಿ ಇಲಾಖೆ ಅಥವಾ ಅರೆ ಸರ್ಕಾರಿ ಸ್ವಾಮ್ಯದ ಸಂಸ್ಥೆಯ ಸೇವೆಯಿಂದ ವಜಾಗೊಂಡಿರುವ ನೌಕರರು ನೇಮಕಾತಿಗೆ ಅರ್ಹರಲ್ಲ.

14.13 ಕಾನೂನು ಬಾಹಿರವೆಂದು ಘೋಷಿಸಲಾದ ಸಂಸ್ಥೆ/ಸಂಸ್ಥೆಗಳು ಅಥವಾ ಸಂಘದ/ಸಂಘಗಳ ಸದಸ್ಯರಾಗಿದ್ದರೆ ಅಥವಾ ಇನ್ನಾವುದೇ ರೀತಿಯಲ್ಲಿ ಅಂತಹ ಸಂಸ್ಥೆ/ಸಂಸ್ಥೆಗಳು ಅಥವಾ ಸಂಘದ/ಸಂಘಗಳೊಂದಿಗೆ ನಿಕಟ ಸಂಪರ್ಕ ಹೊಂದಿದ್ದರೆ ಅಂತಹ ವ್ಯಕ್ತಿ ನೇಮಕಾತಿಗೆ ಅರ್ಹರಾಗುವುದಿಲ್ಲ.

14.14 ಅಭ್ಯರ್ಥಿಯು ಸಮಾಜಘಾತುಕ ಕೃತ್ಯಗಳಲ್ಲಿ ತೊಡಗಿ ಅಪರಾಧಿಯಾಗಿದ್ದರೆ ಅಂತಹ ವ್ಯಕ್ತಿಗಳು ನೇಮಕಾತಿಗೆ ಅರ್ಹರಾಗುವುದಿಲ್ಲ.

14.15 ಒಬ್ಬರಿಗಿಂತ ಹೆಚ್ಚು ಜೀವಂತ ಪತ್ನಿಯರನ್ನು / ಪತಿಯರನ್ನು ಹೊಂದಿದ ಪುರುಷ / ಮಹಿಳೆ ಅಭ್ಯರ್ಥಿಗಳು ಸರ್ಕಾರದ ಪೂರ್ವಾನುಮತಿ ಇಲ್ಲದೇ ನೇಮಕಾತಿಗೆ ಅರ್ಹರಾಗಿರುವುದಿಲ್ಲ.

14.16 ಯಾವುದೇ ಅಭ್ಯರ್ಥಿಯು ಕೇಂದ್ರ ಅಥವಾ ಯಾವುದೇ ರಾಜ್ಯ ಸರ್ಕಾರ / ಸರ್ಕಾರಿ ಸಂಸ್ಥೆಗಳಿಗೆ ನಡೆಸುವ ಯಾವುದೇ ಪರೀಕ್ಷೆಗಳಿಗೆ ಅಥವಾ ಆಯ್ಕೆಗಳಿಗೆ ಹಾಜರಾಗಲು ತಾತ್ಕಾಲಿಕವಾಗಿ ಬಹಿಷ್ಕರಿಸಲ್ಪಟ್ಟಿದ್ದರೆ ಅಥವಾ ಖಾಯಂ ಆಗಿ ಅನರ್ಹಗೊಂಡಿದ್ದರೆ ಅಥವಾ ಬಹಿಷ್ಕರಿಸಲ್ಪಟ್ಟಿದ್ದರೆ, ಅಂತಹ ಅಭ್ಯರ್ಥಿಯು ನೇಮಕಾತಿಗೆ ಅರ್ಹರಾಗಿರುವುದಿಲ್ಲ.

**14.17** ಅಭ್ಯರ್ಥಿಯು ನೇಮಕಾತಿ ಪರೀಕ್ಷೆಗೆ ಬೇರೊಬ್ಬ ವ್ಯಕ್ತಿಯನ್ನು ತನ್ನ ಪರವಾಗಿ ಕಳುಹಿಸಿದಲ್ಲಿ ಅಥವಾ ತಪ್ಪು ಮಾಹಿತಿಗಳನ್ನು ನಮೂದಿಸಿದಲ್ಲಿ ಅಥವಾ ಕೃತ್ರಿಮ ಅಥವಾ ತಿದ್ದಿದ ದಾಖಲಾತಿಗಳನ್ನು ಅಥವಾ ಅಸತ್ಯ ವಿವರಗಳನ್ನು ನೀಡಿದಲ್ಲಿ ಅಥವಾ ಸತ್ಯ ವಿಷಯಗಳನ್ನು ಮರೆಮಾಚಿದ ಅಥವಾ ಅನುಚಿತ ಮಾರ್ಗಗಳನ್ನು ಉಪಯೋಗಿಸಿದಲ್ಲಿ ಅಥವಾ ಪ್ರಯತ್ನಿಸಿದಲ್ಲಿ ಈ ನೇಮಕಾತಿಗೆ ಅವರನ್ನು ಅನರ್ಹರೆಂದು ಪರಿಗಣಿಸಲಾಗುವುದು ಮತ್ತು ಕರ್ನಾಟಕ ನಾಗರಿಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ಉಪ ನಿಯಮ 20 ರಂತೆ ಅಪರಾಧಿ ವ್ಯವಹರಣೆಗೆ ಒಳಪಡುವರು.

**14.18** ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ–ಎಸ್‌ಪಿಎಲ್–04–ಪಿಇಟಿ–2005 ದಿನಾಂಕ 31–3–2006 ರಂತೆ ಅಂಶದಾಯಿ ನಿವೃತ್ತಿ ಯೋಜನೆ (Contributory Pension Scheme) ಗೆ ಈ ನೇಮಕಾತಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳು ಬದ್ಧರಾಗಿರುತ್ತಾರೆ.

**14.19** ಆಯ್ಕೆ ಮತ್ತು ನೇಮಕಾತಿ ಪ್ರಕ್ರಿಯೆಯ ಯಾವುದೇ ಹಂತದಲ್ಲಿ ಆಯ್ಕೆಗೆ ಪರಿಗಣಿಸಿರುವ ಅಂಶಗಳ ಬಗ್ಗೆ ವ್ಯತ್ಯಾಸ ಕಂಡು ಬಂದಲ್ಲಿ ಅಥವಾ ಆಕ್ಷೇಪಣೆ ಸಲ್ಲಿಕೆಯಾದಲ್ಲಿ, ಕೋರ್ಟು ತೀರ್ಪುಗಳು, ಸರಕಾರದ ನಿರ್ದೇಶನಗಳು, ಇಲಾಖೆ ಸುತ್ತೋಲೆಗಳು ಬಂದಲ್ಲಿ, ಪ್ರಕಟಿಸಿರುವ ಆಯ್ಕೆ ಪಟ್ಟಿಯಲ್ಲಿ ಸೂಕ್ತ ಬದಲಾವಣೆ ಮಾಡಿ ಆಯ್ಕೆ ಪಟ್ಟಿ ಪರಿಷ್ಕರಿಸುವ ಅಧಿಕಾರವನ್ನು ಆಯ್ಕೆ ಪ್ರಾಧಿಕಾರವು ಹೊಂದಿರುತ್ತದೆ.

**14.20** ಒಂದು ವೇಳೆ ಅಧಿಸೂಚನೆಯಲ್ಲಿ ನಮೂದಿಸಿರುವ ಹುದ್ದೆಗಳ ಸಂಖ್ಯೆಯಲ್ಲಿ ಕಡಿತ ಅಥವಾ ಹೆಚ್ಚುವರಿ ಆದಲ್ಲಿ ಮತ್ತು ಮೀಸಲಾತಿ ವರ್ಗೀಕರಣದಲ್ಲಿ ಏನಾದರೂ ಬದಲಾವಣೆ ಮಾಡಬೇಕಾದ ಅವಶ್ಯಕತೆ ಕಂಡು ಬಂದಲ್ಲಿ ಬದಲಾವಣೆ ಮಾಡಲಾಗುವುದು ಮತ್ತು ಬದಲಾದ ವಿವರಗಳನ್ನು ಇಲಾಖಾ ವೆಬ್‌ಸೈಟ್: www.aranya.gov.in ನಲ್ಲಿ ಪ್ರಕಟಿಸಲಾಗುವುದು.

**14.21** ಅಭ್ಯರ್ಥಿಯು ಹುದ್ದೆಗೆ ಅರ್ಜಿ ಸಲ್ಲಿಸಿದ ತಕ್ಷಣ ತಾನು ನಿಯಮ ಮತ್ತು ಅಧಿನಿಯಮಗಳಿಗೆ (Rules & Regulations) ಬದ್ಧನಾಗಿರುತ್ತಾನೆ ಎಂದು ಭಾವಿಸಲಾಗಿರುತ್ತದೆ. ಒಂದು ವೇಳೆ ತಾನು ಸದರಿ ಹುದ್ದೆಗೆ ಆಯ್ಕೆಯಾಗದ ಪಕ್ಷದಲ್ಲಿ ತದನಂತರ ಅದೇ ನಿಯಮಗಳನ್ನು ಪ್ರಶ್ನಿಸಲು ಬರುವುದಿಲ್ಲ.

**14.22** ಉತ್ತರ ಪತ್ರಿಕೆಯನ್ನು ಸ್ಕ್ಯಾನಿಂಗ್ ಮಾಡಿಸಿ ಗಣಕ ಯಂತ್ರದ ಮುಖೇನ ಅರ್ಹತಾ ಪಟ್ಟಿಯನ್ನು ಸಿದ್ಧಪಡಿಸುವುದರಿಂದ ಲಿಖಿತ(Aptitude) ಪರೀಕ್ಷೆಗೆ ಅರ್ಹತೆ ಪಡೆದಿರುವ ಅಭ್ಯರ್ಥಿಗಳು ಉತ್ತರ ಪತ್ರಿಕೆಯ ಮಾಹಿತಿಯನ್ನು ಭರ್ತಿ ಮಾಡುವ ಸಲುವಾಗಿ ಪರೀಕ್ಷೆಗೆ ನಿಗದಿಪಡಿಸಿರುವ ಸಮಯಕ್ಕಿಂತ ಅರ್ಧ ಗಂಟೆ ಮುಂಚಿತವಾಗಿ ಪರೀಕ್ಷಾ ಕೊಠಡಿಗೆ ತಪ್ಪದೇ ಹಾಜರಾಗತಕ್ಕದ್ದು. ಆ ಸಮಯದಲ್ಲಿ ಪರೀಕ್ಷಾ ಮೇಲ್ವಿಚಾರಕರು ಕೆಲವು ಮಾರ್ಗಸೂಚನೆಗಳನ್ನು ನೀಡುತ್ತಾರೆ.

**14.23** ನೇರ ನೇಮಕಾತಿ ಪ್ರಕ್ರಿಯೆಯ ಯಾವುದೇ ವಿಷಯದಲ್ಲಿ ಯಾವುದೇ ಪತ್ರ ವ್ಯವಹಾರಕ್ಕೆ ಆಸ್ಪದವಿರುವುದಿಲ್ಲ.

**14.24** ಅಭ್ಯರ್ಥಿಯ ಆಯ್ಕೆ ಪ್ರಕ್ರಿಯೆಗೆ ಸಂಬಂಧಿಸಿದಂತೆ ಯಾವುದೇ ಸ್ಪಷ್ಟೀಕರಣಕ್ಕೆ ಆಯ್ಕೆ ಪ್ರಾಧಿಕಾರದ ತೀರ್ಮಾನವೇ ಅಂತಿಮವಾಗಿರುತ್ತದೆ. ಎಲ್ಲಾ ಕಾನೂನು ವಿವಾದಗಳು ಕರ್ನಾಟಕ ಆಡಳಿತ ನ್ಯಾಯಮಂಡಳಿಯ ವ್ಯಾಪ್ತಿಗೆ ಒಳಪಟ್ಟಿರುತ್ತದೆ.

**ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ**
**(ಮುಖ್ಯಸ್ಥರು, ಅರಣ್ಯ ಪಡೆ)**
**ಮತ್ತು ಆಯ್ಕೆ ಪ್ರಾಧಿಕಾರ.**

**PR-225**
**SC-100**

**FORM-I**

**(See Rule 9)**

**POLICE DEPARTMENT**

**OFFICE OF THE SUPERINTENDENT OF POLICE BAGALKOT.**

**NOTIFICATION Dated : 03-09-2015.**

**Smt. SHAILAJA SIDDAPPA KORTI** working as WOMEN POLICE CONSTABLE IN THE POLICE DEPT. NAVANAGAR POLICE STATION BAGALKOT DISTRICT is permitted to change her name to **SHAILAJA MANIKAGOUDA PATIL.**

**PD C/N - 44**
**SC - 10**

**SUPERINTENDENT OF POLICE**
**BAGALKOT.**

**FORM-I**

**(See Rule 9)**

**CO-OPERATION DEPARTMENT**

**OFFICE OF THE REGISTRAR OF CO-OPERATIVE SOCIETIES, NO.1 ALI ASKAR ROAD, BENGALURU-560052**

**NOTIFICATION**

**NO: EST/239/ENL-1/2014-15 Dated : 26-08-2015.**

**Smt. BASAMMA . H. DODDAGOUDAR** working as Co-operative Development Officer in the Co-operation Department, Office of the Deputy Registrar of Co-operative Societies Haveri is permitted to change her name to **Smt. SUDHA VIKRAM KULKARNI.**

**PD C/N - 43**
**SC - 10**

**REGISTRAR OF CO-OPERATIVE SOCIETIES,**
**BENGALURU-560052**

## ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ದಂಡಾಧಿಕಾರಿಗಳ ಕಾರ್ಯಾಲಯ, ಹಾಸನ ಜಿಲ್ಲೆ, ಹಾಸನ

### ಅಧಿಕೃತ ಜ್ಞಾಪನ

**ನಂ. ಗ್ರಾ.ಲೆ.ಸಿಬ್ಬಂದಿ–213/2014–15, ದಿನಾಂಕ: 12–08–2015**

**ವಿಷಯ** : ಹಾಸನ ಜಿಲ್ಲಾ ಕಂದಾಯ ಘಟಕದಲ್ಲಿ 2014 ನೇ ಸಾಲಿನಲ್ಲಿ ಖಾಲಿ ಇರುವ ಗ್ರಾಮಲೆಕ್ಕಿಗರ ಹುದ್ದೆಗಳಿಗೆ ನೇರ ನೇಮಕಾತಿ ಮೂಲಕ ಆಯ್ಕೆ ಆದ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡುವ ಕುರಿತು.

**ಉಲ್ಲೇಖ** :
1. ಸರ್ಕಾರದ ಪತ್ರದ ಸಂಖ್ಯೆ: ಕಂ.ಇ. 33 ಬಿಎಸ್‌ಸಿ 2012, ದಿನಾಂಕ: 21/06/2012.
2. ಈ ಕಛೇರಿಯ ಸಮ ಸಂಖ್ಯೆ ಅಧಿಸೂಚನೆ ದಿನಾಂಕ: 2/05/2015.
3. ಈ ಕಛೇರಿಯ ಸಮ ಸಂಖ್ಯೆ ಅಧಿಕೃತ ಜ್ಞಾಪನ ದಿನಾಂಕ: 10/07/2015.
4. ಈ ಕಛೇರಿಯ ಸಮ ಸಂಖ್ಯೆಯ ನೇಮಕಾತಿ ರದ್ದಿಯಾತಿ ಆದೇಶ ದಿನಾಂಕ: 12/08/2015.
5. ಅನ್ನಪೂರ್ಣ ಎನ್.ಆರ್. ಇವರ ಮನವಿ ದಿನಾಂಕ: 08/07/2015.

ಹಾಸನ ಜಿಲ್ಲೆಯ ಕಂದಾಯ ಇಲಾಖೆಯಲ್ಲಿ 2015ನೇ ಸಾಲಿನಲ್ಲಿ ಖಾಲಿ ಇರುವ 81 ಗ್ರಾಮಲೆಕ್ಕಿಗರ ಹುದ್ದೆಗಳನ್ನು ನೇರನೇಮಕಾತಿ ಮೂಲಕ ಭರ್ತಿಮಾಡುವ ಸಂಬಂಧ ಕರ್ನಾಟಕ ಸಾಮಾನ್ಯ ಸೇವೆಗಳು (ರೆವೆನ್ಯೂ ಸಬಾರ್ಡಿನೇಟ್ ಬ್ರಾಂಚ್, ಕೇಡರ್ ಅಂಡ್ ರಿಕ್ರೂಟ್‌ಮೆಂಟ್) ನಿಯಮಗಳನ್ವಯ ಉಲ್ಲೇಖ (3)ರಲ್ಲಿ ಕಾಯ್ದಿರಿಸಿರುವ ಪಟ್ಟಿಯಲ್ಲಿನ ಒಟ್ಟು 3 ಜನ ಅರ್ಹ ಅಭ್ಯರ್ಥಿಗಳನ್ನು ಮೆರಿಟ್ ಮತ್ತು ವರ್ಗವಾರು ಆಧಾರದ ಮೇಲೆ ಆಯ್ಕೆ ಮಾಡಿ ನೇಮಕಾತಿ ಆದೇಶ ನೀಡಲಾಗಿರುತ್ತದೆ.

ಹೀಗೆ ನೇಮಕಾತಿ ಆದೇಶ ನೀಡಿದ ಒಟ್ಟು 3 ಅಭ್ಯರ್ಥಿಗಳ ಪೈಕಿ ಇಬ್ಬರು ಗ್ರಾಮಲೆಕ್ಕಿಗರ ಹುದ್ದೆಯ ಕರ್ತವ್ಯಕ್ಕೆ ಹಾಜರಾಗಿದ್ದು, ಉಳಿದ ಈ ಕೆಳಕಂಡ ಅಭ್ಯರ್ಥಿ ಉಲ್ಲೇಖ (5)ರಲ್ಲಿ ಈ ಕಛೇರಿಗೆ ಅರ್ಜಿಯನ್ನು ಸಲ್ಲಿಸಿ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಗ್ರಾಮಲೆಕ್ಕಿಗರ ಹುದ್ದೆಯನ್ನು ನಿರಾಕರಿಸಿರುವುದಾಗಿ ಕೋರಿರುತ್ತಾರೆ.

ಆದ್ದರಿಂದ ಉಲ್ಲೇಖ (4)ರ ಆದೇಶದಲ್ಲಿ ಸದರಿ ಅಭ್ಯರ್ಥಿಯ ನೇಮಕಾತಿಯನ್ನು ರದ್ದುಪಡಿಸಿ ಆದೇಶಿಸಿದೆ.

| ಕ್ರ. ಸಂ. | ರೆಫರೆನ್ಸ ಸಂ. | ಅಭ್ಯರ್ಥಿಯ ಹೆಸರು | ತಂದೆಯ/ಗಂಡನ ಹೆಸರು | ವಿಳಾಸ | ನೇಮಕ ಆಗಿರುವ ಸ್ಥಳ | ಆಯ್ಕೆ ಆಗಿರುವ ವರ್ಗ |
|---|---|---|---|---|---|---|
| 1 | 161170 | ಅನ್ನಪೂರ್ಣ ಎನ್.ಆರ್ | ರೇಣುಕಪ್ರಸಾದ್ | ನಾಗವಲ್ಲಿ ಗ್ರಾಮ ಮತ್ತು ಅಂಚೆ, ಹಿಬ್ಬೂರು ಹೋಬಳಿ, ತುಮಕೂರು ತಾಲ್ಲೂಕು, ತುಮಕೂರು–572118. | ನರಸೀಪುರ ವೃತ್ತ, ಕಣಕಟ್ಟೆ ಹೋಬಳಿ, ಅರಸೀಕೆರೆ ತಾಲ್ಲೂಕು. | ಸಾಮಾನ್ಯ–ಮಹಿಳೆ |

ಈ ಮೇಲ್ಕಂಡ ಅಭ್ಯರ್ಥಿಯ ಬದಲಾಗಿ ಕಾಯ್ದಿರಿಸಿದ ಪಟ್ಟಿಯಲ್ಲಿರುವ ಸಮ ಮೀಸಲಾತಿಯ ಈ ಮುಂದಿನ ಅಭ್ಯರ್ಥಿಯನ್ನು ಗ್ರಾಮಲೆಕ್ಕಿಗರ ಹುದ್ದೆಯ ವೇತನ ಶ್ರೇಣಿಯ 11600–200–12000–250–13000–300–14200–350–15600–400–17200–450–19000–500–21000 ರಲ್ಲಿ ನೇಮಕಾತಿ ಮಾಡಿ ಆದೇಶಿಸಿರುತ್ತದೆ.

| ಕ್ರ. ಸಂ. | ರೆಫರೆನ್ಸ ಸಂ. | ಅಭ್ಯರ್ಥಿಯ ಹೆಸರು | ತಂದೆಯ/ಗಂಡನ ಹೆಸರು | ವಿಳಾಸ | ಆಯ್ಕೆ ಆಗಿರುವ ವರ್ಗ | ನೇಮಕಾತಿ ಮಾಡಿರುವ ವೃತ್ತದ ಹೆಸರು |
|---|---|---|---|---|---|---|
| 1 | 170098 | ಸುಕನ್ಯ ರಾಜೇಗೌಡ ಬಿರದಾರ್ | ರಾಜೇಗೌಡ | ಸಾವಲಗಿ ಗ್ರಾಮ ಮತ್ತು ಅಂಚೆ, ಜಮಖಂಡಿ ತಾಲ್ಲೂಕು, ಬಾಗಲಕೋಟೆ–587330. | ಸಾಮಾನ್ಯ–ಮಹಿಳೆ | ನರಸೀಪುರ ವೃತ್ತ, ಕಣಕಟ್ಟೆ ಹೋಬಳಿ, ಅರಸೀಕೆರೆ ತಾಲ್ಲೂಕು. |

**ಷರತ್ತುಗಳು:**

1. ಅಭ್ಯರ್ಥಿಯು ಈ ಆದೇಶ ತಲುಪಿದ 15 ದಿನಗಳೊಳಗೆ ಮೂಲ ದಾಖಲಾತಿಗಳೊಂದಿಗೆ ಸಂಬಂಧಿಸಿದ ತಹಶೀಲ್ದಾರರ ಸಮಕ್ಷಮದಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವುದು. ತಪ್ಪಿದಲ್ಲಿ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) 1977ರ ನಿಯಮ 18 ರನ್ವಯ ನೇಮಕಾತಿಯನ್ನು ರದ್ದುಪಡಿಸಲಾಗುತ್ತದೆ.
2. ಅಭ್ಯರ್ಥಿಯು ನೇಮಕಾತಿಗೆ ಅನರ್ಹರೆಂದು ಕಂಡು ಬಂದಲ್ಲಿ, ನೇಮಕಾತಿಯನ್ನು ಯಾವುದೇ ಸೂಚನೆಯನ್ನು ನೀಡದೆ ರದ್ದುಪಡಿಸಲಾಗುವುದು.
3. ಅಭ್ಯರ್ಥಿಯು ವಾಸಿಸುತ್ತಿರುವ ಕ್ಷೇತ್ರಕ್ಕೆ ಸಂಬಂಧಿಸಿದ ಇಬ್ಬರು ಗಣ್ಯ ವ್ಯಕ್ತಿಗಳಿಂದ ನೀಡಲ್ಪಟ್ಟ ನಡತೆ ಪ್ರಮಾಣ ಪತ್ರಗಳನ್ನು ಹಾಜರುಪಡಿಸುವುದು.
4. ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾಗುವ ಸಮಯದಲ್ಲಿ ಸರ್ಕಾರಿ ವೈದ್ಯರಿಂದ ಪಡೆದ ವೈದ್ಯಕೀಯ ಅರ್ಹತಾ ಪ್ರಮಾಣ ಪತ್ರವನ್ನು ಹಾಜರುಪಡಿಸುವುದು.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



5. ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗ/ಪ್ರವರ್ಗ–1/2ಎ/2ಬಿ/3ಎ/3ಬಿ, ಗ್ರಾಮೀಣ, ಯೋಜನಾ ನಿರಾಶ್ರಿತರು ಹಾಗೂ ಇತ್ಯಾದಿ ಮೀಸಲಾತಿಯಡಿಯಲ್ಲಿ ಆಯ್ಕೆಯಾಗಿರುವ ಅಭ್ಯರ್ಥಿಗಳಿಗೆ, ಅವರು ಸಲ್ಲಿಸಿರುವ ಸದರಿ ಪ್ರಮಾಣ ಪತ್ರಗಳ ಸಿಂಧುತ್ವದ ಬಗ್ಗೆ ಸಂಬಂಧಿಸಿದ ಜಿಲ್ಲಾಧಿಕಾರಿಗಳಿಂದ / ಸಕ್ಷಮ ಪ್ರಾಧಿಕಾರದಿಂದ ನೀಡಬೇಕಾದ ಸಿಂಧುತ್ವ ಪ್ರಮಾಣ ಪತ್ರಗಳನ್ನು ಹಾಗೂ ಗುಣ ನಡತೆ ಹಾಗೂ ಪೂರ್ವ ಚಾರಿತ್ಯದ ಬಗ್ಗೆ ಸಂಬಂಧಪಟ್ಟ ಪೊಲೀಸ್ ಅಧೀಕ್ಷಕರ ವರದಿಯನ್ನು ಕಾಯ್ದಿರಿಸಿ ನೇಮಕಾತಿ ಆದೇಶ ನೀಡಲಾಗಿರುತ್ತದೆ.

6. ಈ ನೇಮಕಾತಿಯು ಅಭ್ಯರ್ಥಿಯು ಹಾಜರುಪಡಿಸಿರುವ ದ್ವಿತೀಯ ಪಿ.ಯು.ಸಿ. ಅಂಕ ಪಟ್ಟಿ ಮತ್ತು ಎಸ್.ಎಸ್.ಎಲ್.ಸಿ. ಅಂಕ ಪಟ್ಟಿಗಳ ಸತ್ಯಾಪನೆಗೆ ಒಳಪಟ್ಟಿರುತ್ತದೆ.

7. ಅಭ್ಯರ್ಥಿಯು ಸಲ್ಲಿಸುವ ಮೂಲ ದಾಖಲಾತಿಗಳಲ್ಲಿ ತಪ್ಪು ಮಾಹಿತಿ ಅಥವಾ ಸುಳ್ಳು ಎಂದು ಕಂಡು ಬಂದಲ್ಲಿ ಅಂತಹವರ ಆಯ್ಕೆಯನ್ನು ರದ್ದುಪಡಿಸಲಾಗುತ್ತದೆ. ಹಾಗೂ ನಿಯಮಾನುಸಾರ ಶಿಸ್ತು ಕ್ರಮ ಜರುಗಿಸಲಾಗುವುದು.

8. ಶೇಕಡವಾರು ಅಂಕಗಳು ಒಂದೇ ಇದ್ದಂತಹ ಅಭ್ಯರ್ಥಿಗಳ ಪೈಕಿ ನಿಯಮಾನುಸಾರ ವಯಸ್ಸಿನಲ್ಲಿ ಹಿರಿಯರಾದ ಅಭ್ಯರ್ಥಿಯನ್ನು ಆಯ್ಕೆ ಮಾಡಿದೆ.

9. ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾದ 2 ವರ್ಷಗಳ ಅವಧಿಯು ಪರಿವೀಕ್ಷಣೆ ಅವಧಿ (Probation Period) ಆಗಿರುತ್ತದೆ. ಈ ಅವಧಿಯಲ್ಲಿ (1) ಅಕೌಂಟ್ಸ್ ಲೋಯರ್ (2) ರೆವಿನ್ಯೂ ಲೋಯರ್ (3) ಕಂಪ್ಯೂಟರ್ ಲಿಟ್ರೆಸಿ ಟೆಸ್ಟ್ ಮತ್ತು (4) ಕನ್ನಡ ಭಾಷಾ ಪರೀಕ್ಷೆ (SSLC ಯಲ್ಲಿ ಕನ್ನಡವನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ತೆಗೆದುಕೊಳ್ಳದಿದ್ದಲ್ಲಿ) ಗಳಲ್ಲಿ ಉತ್ತೀರ್ಣರಾಗುವುದು. ತಪ್ಪಿದಲ್ಲಿ ಹಾಗೂ ಕೆಲಸ ಕಾರ್ಯಗಳು ತೃಪ್ತಿಕರವಾಗಿರದಿದ್ದಲ್ಲಿ ಸೇವೆಯಿಂದ ತೆಗೆದು ಹಾಕಲಾಗುವುದು.

10. ಅಭ್ಯರ್ಥಿಯು ಸೇವೆಗೆ ಹಾಜರಾಗಿ ಭಾರತ ಸಂವಿಧಾನದ ರೀತ್ಯಾ "ನಿಷ್ಠೆಯ ಪ್ರಮಾಣ ವಚನ ಸ್ವೀಕರಿಸುವುದು."

11. ಅಭ್ಯರ್ಥಿಯು ಸರ್ಕಾರದ ಆದೇಶ ನಂ. FD/SPL/04/PET/05 ದಿನಾಂಕ: 31–03–2006 ರಂತೆ ಹೊಸ ನಿವೃತ್ತಿ ವೇತನ ಯೋಜನೆಗೆ ಒಳಪಟ್ಟಿರುತ್ತಾರೆ.

12. ಸರ್ಕಾರದ ಸುತ್ತೋಲೆ ಸಂ.ಕಂ.ಇ. 54 ಬಿಎಸ್‌ಸಿ 2007, ದಿನಾಂಕ: 27–03–2007 ರನ್ವಯ ಅಂತರ ಜಿಲ್ಲಾ ವರ್ಗಾವಣೆಗೆ ಹಾಸನ ಜಿಲ್ಲೆಯಲ್ಲಿ ಕನಿಷ್ಟ 5 ವರ್ಷಗಳ ಸೇವೆಯನ್ನು ಕಡ್ಡಾಯವಾಗಿ ಪೂರೈಸತಕ್ಕದ್ದು.

13. ಅಭ್ಯರ್ಥಿಗಳು, ಕರ್ನಾಟಕ ನಾಗರೀಕ ಸೇವೆ (ನಡತೆ) ನಿಯಮಗಳು 1966 ಹಾಗೂ ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ, ಮೇಲ್ಮನವಿ) ನಿಯಮಗಳು 1957 ಹಾಗೂ ಕಾಲಕಾಲಕ್ಕೆ ಸರ್ಕಾರದಿಂದ ಹೊರಡಿಸಲಾಗುವ ಇತರೆ ನಿಯಮಾವಳಿಗಳಿಗೆ ಬದ್ಧರಾಗಿರುತ್ತಾರೆ.

14. ಅಭ್ಯರ್ಥಿಯು ರೂ. 1000/– ಭದ್ರತಾ ಠೇವಣಿಯನ್ನು ರಾಷ್ಟ್ರೀಯ ಉಳಿತಾಯ ಪತ್ರದ ಮೂಲಕ ಸಂಬಂಧಪಟ್ಟ ತಹಶೀಲ್ದಾರರಲ್ಲಿ ಹಾಜರುಪಡಿಸುವುದು ಹಾಗೂ ತಹಶೀಲ್ದಾರರು ಈ ಮೊತ್ತಕ್ಕೆ ಭದ್ರತಾ ಮುಚ್ಚಳಿಕೆ ಪತ್ರವನ್ನು ಪಡೆದು ಸರ್ಕಾರಕ್ಕೆ ಆಧಾರ ಮಾಡಿಕೊಳ್ಳುವುದು.

15. ಅಭ್ಯರ್ಥಿಯ ಜ್ಯೇಷ್ಠತೆಯು ಈ ಅಧಿಕೃತ ಜ್ಞಾಪನದಲ್ಲಿನ ಕ್ರಮದನುಸಾರವಾಗಿಯೇ ಇರತಕ್ಕದ್ದು ಹಾಗೂ ತದನಂತರ ಈ ಸಂಬಂಧ ಸರ್ಕಾರ ಹೊರಡಿಸುವ ಕಾನೂನು ತಿದ್ದುಪಡಿಗಳಿಗೆ ಒಳಪಟ್ಟಿರುತ್ತದೆ.

**ಉಮೇಶ್ ಹೆಚ್. ಕುಸುಗಲ್**
**ಅಧ್ಯಕ್ಷರು**
**ಗ್ರಾಮ ಲೆಕ್ಕಿಗರ ನೇರ ನೇಮಕಾತಿ ಆಯ್ಕೆ ಪ್ರಾಧಿಕಾರ, ಮತ್ತು ಜಿಲ್ಲಾಧಿಕಾರಿಗಳು,**
**ಹಾಸನ ಜಿಲ್ಲೆ, ಹಾಸನ.**

**PR - 224**
**SC - 10**

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59